ನವೀನ ತಂತ್ರದ ಸಾಹಿತ್ಯ ಕೃತಿ

# 'ಡೆಹರಿ-ಓನ್-ಸೋನ್'

ಸೋನ್ ದಂಡೆಯ ಡೆಹರಿಯಲ್ಲಿ

## ದೇವರು ಲೆಕ್ಕ ಬಿಡಿಸಿದ!


ನಿರೂಪಿಸಿದವರು:

**ಮೃತ್ಯುಂಜಯ ಬಸವಯ್ಯ ಬೂದಿಹಾಳಮಠ**



ಪ್ರಕಾಶನ:

ಆದರ್ಶ ಜೀವನ ಗ್ರಂಥಮಾಲಾ

೫ ಎರಡನೆಯ ಒಳಬೀದಿ ಹೊಸೂರು- P.O. ವಿದ್ಯಾನಗರ

ಹುಬ್ಬಳ್ಳಿ.

ಜೂನ್. ೧೯೬೭

ರೂ. ೨-೨೫

ಪ್ರಕಾಶಕರು:
ಎಮ್. ಬಿ. ಬೂದಿಹಾಳಮಠ
೫, ಎರಡನೆಯ ಒಳಬೀದಿ
ಹೊಸೂರು, P.O. ವಿದ್ಯಾನಗರ, ಹುಬ್ಬಳ್ಳಿ. Phone: 2288

ಶ್ರೀ ಎಮ್. ಬಿ. ಬೂದಿಹಾಳಮಠ ಇವರು ಈ ಗ್ರಂಥದ ಒಡೆಯರು.



Title of the Book: "Dehri-on-Sone."
(Based on All India Children's Act)
Author: M. B. Budihalmath
Editor, Adarsha Jeevana Granthamla,
5, Second cross, Hosur,
P.O. Vidyanagar-HUBLI
(Karnatak)



ಮುದ್ರಕರು
ಎಸ್. ಎಸ್. ಚಿಕ್ಕಮಠ,
"ಶ್ರೀ ಸಾಯಿನಾಥ" ಪ್ರಿಂಟಿಂಗ್ ಪ್ರೆಸ್
ಕೊಪ್ಪಿಕರ ರೋಡ, ಹುಬ್ಬಳ್ಳಿ.

ಧಾರವಾಡದ ಮುರುಘಾಮಠಾಧ್ಯಕ್ಷ ಪರಂಪರೆಯು ಪರಮಪೂಜ್ಯ ಲಿಂ. ಮೃತ್ಯುಂಜಯ ಮಹಾಸ್ವಾಮಿಗಳು ಮತ್ತು ಶ್ರೀ ನಿ. ಪ್ರ. ಸ್ವ. ಪೂಜ್ಯ ಮಹಾಂತ ಸ್ವಾಮಿಗಳು ಇವರ ಪಾದಾರವಿಂದಗಳಲ್ಲಿ ಅನಂತ ಶಿರಸಾಷ್ಟಾಂಗ ನಮಸ್ಕಾರಗಳು.

## ಅಭಿಮಾನಿಗಳಲ್ಲಿ ನಮ್ರ ನಿವೇದನೆ

ನಾನು ಧಾರವಾಡದ "ಜಯಕರ್ನಾಟಕ" ಪತ್ರಿಕೆಗಳ ಸಂಪಾದಕನಾಗಿದ್ದಾಗ "ಡೆಹರಿ-ಓನ್-ಸೋನ್" ಭಾವಕಥೆಯ ಮೊದಲಿನ ಕೆಲವು ಅಧ್ಯಾಯಗಳನ್ನು ೧೯೫೯-೬೦ ರಲ್ಲಿ ಬರೆದು "ಜಯಕರ್ನಾಟಕ" ವಾರ ಪತ್ರಿಕೆಯಲ್ಲಿ ಕೆಲವು ವಾರ ಪ್ರಕಟಿಸಿದೆನು. ಅಪೂರ್ಣವಾದುದನ್ನು ಮಹಾಸ್ವಾಮಿಗಳ ಕೃಪೆಯಿಂದ ಈಗ ಪೂರ್ಣ ಬರೆದು ಪ್ರಕಟಿಸಿದ್ದೇನೆ. ಈ ಗ್ರಂಥದ ವಸ್ತು ಮತ್ತು ಕಥಾ ವಿನ್ಯಾಸದ ಬಗೆಗೆ ಇದರಲ್ಲಿ ಬೇರೆಡೆ ಸ್ವಲ್ಪ ಬರೆದಿದ್ದೇನೆ. ಈ ಸಿದ್ಧಾಂತ (ದೈವೀನ್ಯಾಯದ ಸಾರ್ವಭೌಮ ಅಧಿಕಾರ) ಇನ್ನೂ ವಿಕಾಸವಾಗಿ ಕ್ರಮೇಣ ನಮ್ಮ ಈ ಗ್ರಂಥಮಾಲೆಯಲ್ಲಿ ಪ್ರಕಟವಾಗುವದು. ಅಭಿಮಾನಿಗಳ ಗಮನವಿರಲಿ.

ನಮ್ಮ ಗ್ರಂಥಮಾಲೆಯ ಪುನರಾರಂಭಕ್ಕೆ ಪ್ರೋತ್ಸಾಹ ನೀಡಿರುವ ಶ್ರೀ ಎಸ್. ಎಸ್. ಒಡೆಯರ (ರಜಿಸ್ಟ್ರಾರ ಕರ್ನಾಟಕ ವಿಶ್ವವಿದ್ಯಾಲಯ) ಶ್ರೀ ಮಲ್ಲಯ್ಯ ಚ. ಹಿರೇಮಠ, ಶ್ರೀ ವ್ಹಿ. ಜಿ. ಪಾಟೀಲ ಶ್ರೀ ಕೆ. ಎಸ್. ಮಂಟೂರಶೆಟ್ರ, ಶ್ರೀ ರುದ್ರಣ್ಣ ಡಂಗನವರ, ಶ್ರೀ ಎಸ್. ಎಸ್. ಮಾಟಲದಿನ್ನಿ, ಶ್ರೀ ಸಿದ್ಧಲಿಂಗಪ್ಪಣ್ಣ. ಈ. ಬುಳ್ಳಾ. ಮೆ|| ಆರ್. ಜಿ. ಮತ್ತು ಎಸ್. ಎಸ್. ಬಿಜಾಪುರ ಮತ್ತು ಕಂ; ಶ್ರೀ ಸಿ. ಎಸ್. ಜಗತಿ, ಶ್ರೀ ಈಶ್ವರಪ್ಪಣ್ಣ ವಾಲಿ, ಶ್ರೀ ಆರ್. ಪಿ. ನರೇಂದ್ರಮಠ, ಶ್ರೀ ಜಿ. ಎನ್. ಮಠದ ಮತ್ತು ಶ್ರೀ ಕೆ. ಸದಾನಂದ ಶೆಟ್ಟಿ (ಮ್ಯಾನೇಜರ ವಿಜಯಾ ಬ್ಯಾಂಕ ಹುಬ್ಬಳ್ಳಿ) ಇವರಿಗೆ ನಾನು ಬಹು ಉಪಕೃತ. ನಮ್ಮ ಗ್ರಂಥ ಮಾಲೆಗೆ ಒಂದು, ಎರಡು ಮತ್ತು ಹತ್ತು ವರ್ಷದ ವಂತಿಗೆಯನ್ನಿತ್ತು ನೆರವಾಗಿರುವ ಮಹನೀಯರಿಗೆ ಕೃತಜ್ಞನಿದ್ದೇನೆ.

ಈ ಗ್ರಂಥವನ್ನು ತಾಳ್ಮೆಯಿಂದ ಮುದ್ರಿಸಿಕೊಟ್ಟಿರುವ ಶ್ರೀ ಎಸ್. ಎಸ್ ಚಿಕ್ಕಮಠ (ಶ್ರೀ ಸಾಯಿನಾಥ ಪ್ರಿಂಟಿಂಗ್ ಪ್ರೆಸ್) ಹುಬ್ಬಳ್ಳಿ, ಗ್ರಂಥದ ಮುಖಪುಟವನ್ನು ಅಂದವಾಗಿ ಮುದ್ರಿಸಿರುವ ಮಿತ್ರರಾದ ಬಸವನಾಳ ಸಹೋದರರು (ರವೀಂದ್ರ ಮುದ್ರಣಾಲಯ) ಧಾರವಾಡ ಮತ್ತು ಮುಖಪುಟದ ಸುಂದರ ರೇಖಾಚಿತ್ರ, ಪಡಿಯಚ್ಚು ಒದಗಿಸಿರುವ ಶ್ರೀ ಕೃಷ್ಣ ಪೋತದಾರ (ಶ್ರೀ ಕೊ) ಧಾರವಾಡ ಇವರೆಲ್ಲರಿಗೆ ನನ್ನ ಅನಂತ ವಂದನೆಗಳು.

ಹುಬ್ಬಳ್ಳಿ
೨೧-೫-೧೯೬೭

ಮೃತ್ಯುಂಜಯ ಬಸವಯ್ಯ ಬೂದಿಹಾಳಮಠ
ಸಂಪಾದಕ
ಆದರ್ಶ ಜೀವನ ಗ್ರಂಥಮಾಲಾ, ಹುಬ್ಬಳ್ಳಿ

ನನ್ನ ಜೀವನದ ಇಂದಿನ ಅತ್ಯಂತ ಸತ್ವ ಪರೀಕ್ಷಾ ಕಾಲದಲ್ಲಿ ಧೀರರಾಗಿ ನನ್ನೊಡನೆ ಸಹಕರಿಸಿ ಸಹನೆಯಿಂದ ಬಾಳುವೆಯನ್ನು ಸಾಗಿಸುತ್ತಿರುವ ನಮ್ಮ ಕುಟುಂಬದ ಸರ್ವರೂ ಹಿರಿಕಿರಿಯರಿಗೆ ಅಕ್ಕರೆಯಿಂದ ಈ ಗ್ರಂಥವನ್ನು ಒಪ್ಪಿಸಿದ್ದೇನೆ.

—ಮೃತ್ಯುಂಜಯ

## Gift of God

"Whom Thou givest Thy banner, Thou
givest the strength to carry it.
Thou givest him love that he may be
able to bear the strain of Thy service.
I therefore desire with all my heart that I
may be liberate d from suffering
by suffering.
I do not desire to achieve salvation by
avoiding the pain which is the gift
of Thy hand.

—**Gurudev Rabindranath Tagore**



## ದೇವರ ವರಪ್ರಸಾದ

"ಯಾರಿಗೆ ನಿನ್ನ ಪತಾಕೆಯನ್ನು ಒಪ್ಪಿಸಿರುವಿಯೋ, ಅವರಿಗೆ ಅದನ್ನು ಎತ್ತಿ ನಡೆಯಲು ಬಲವನ್ನೂ ನೀಡಿರುವಿ. ನಿನ್ನ ಸೇವೆಯ ಪರಿಶ್ರಮವನ್ನು ಸಹಿಸಲು ಅವರಿಗೆ ಪ್ರೇಮದ ಸ್ವಭಾವವನ್ನು ದಯ ಪಾಲಿಸಿರುವಿ. ಅಂತೆಯೇ ಪರಿತಾಪದಿಂದಾಗುವ ಪರಿತಾಪದ ಭಯ ದಿಂದ ನನ್ನನ್ನು ಮುಕ್ತನನ್ನಾಗಿರಿಸಲು ನಾನು ಪೂರ್ಣ ಹೃದಯ ದಿಂದ ಬಯಸುತ್ತೇನೆ. ಹೇ ದೇವ! ನಿನ್ನ ವರಪ್ರಸಾದವಾಗಿ ಲಭಿಸುವ ದುಃಖದಿಂದ ವಿಮುಖನಾಗಿ ಮುಕ್ತಿಯನ್ನು ಸಂಪಾದಿಸಲು ನಾನು ಬಯಸುವದಿಲ್ಲ. —ಗುರುದೇವ ರವೀಂದ್ರನಾಥ ಠಾಕೂರ

## ಆದರ್ಶ ಜೀವನ ಗ್ರಂಥಮಾಲಾ, ಹುಬ್ಬಳ್ಳಿ

### ಅಧಿಕಾರಿ ವರ್ಗ

ತೀ ರೂ. ಶ್ರೀ ಬಸವಯ್ಯ ಬೂದಯ್ಯ ಬೂದಿಹಾಳಮಠ ಮಾರ್ಗದರ್ಶಕರು
ಶ್ರೀ ಮೃತ್ಯುಂಜಯ ಬಸವಯ್ಯ ಬೂದಿಹಾಳಮಠ ಸಂಪಾದಕ
ಚಿ| ಶ್ರೀ ಉಮೇಶಯ್ಯ ನೀಲಕಂಠಯ್ಯ ಸಂಗನಾಳಮಠ ಕಾರ್ಯದರ್ಶಿ

---

## ಆದರ್ಶ ಜೀವನ ಗ್ರಂಥಮಾಲಾ (ಹೊಸೂರು) ಹುಬ್ಬಳ್ಳಿ

### ನಮ್ಮ ಕನ್ನಡ ಪ್ರಕಟನೆಗಳು

೧. ಗೀತಾಂಜಲಿ ............ ರೂ. ೧-೫೦
(ದಿ. ರವೀಂದ್ರನಾಥ ಠಾಕೂರ)

೨. ಅಮೃತ ಜೀವನ ............ ರೂ. ೨-೦೦
(ಅಚ್ಚಿನಲ್ಲಿ)

೩. ಇನ್ನಿ ............ ರೂ. ೧-೭೫
(ಕಾದಂಬರಿ)

೪. ಸ್ವಾತಂತ್ರ್ಯದ ಹಾದಿಯಲ್ಲಿ ಕನ್ನಡಿಗ ............ ರೂ. ೨-೫೦

೫. ಡೆಹರಿ-ಓನ್-ಸೋನ್ ............ ರೂ. ೨-೦೦

ವರ್ಷಕ್ಕೆ ಮೂರು
ಪ್ರಕಟನೆಗಳು.
ವಾರ್ಷಿಕ ವಂತಿಗೆ:
ಆರು ರೂಪಾಯಿಗಳು

ಎಮ್. ಬಿ. ಬೂದಿಹಾಳಮಠ
ಸಂಪಾದಕ
ಆದರ್ಶ ಜೀವನ ಗ್ರಂಥಮಾಲಾ
೫, ಎರಡನೆಯ ಒಳಬೀದಿ, ಹೊಸೂರು
P. O. ವಿದ್ಯಾನಗರ—ಹುಬ್ಬಳ್ಳಿ.

# ಭಾವ-ಕಥಾ ಸಮರ್ಥನೆ

" An artist's vision of Truth is fiction. "

**—Shri Mrityunjaya**

ಮುಂಬಯಿ ನಿಲ್ದಾಣ. ನಾವು ಆರು ಜನರು ಇಂದು ಶುಕ್ರವಾರ ಕಾರ್ಯಕ್ರಮದಂತೆ ಇಲ್ಲಿ ಇಳಿದಿದ್ದೇವೆ.

"ನಮಸ್ಕಾರ! ಸ್ವಾಮಿ!" ಮಿತ್ರ ರಾಮಚಂದ್ರನ ಧ್ವನಿ.

" ನಮಸ್ಕಾರ ! ರಾಮಚಂದ್ರ ! ಎಲ್ಲಿರುವಿ ? " ನಾನು ಅತ್ತ ಇತ್ತ ಹುಡುಕುತ್ತಿದ್ದೇನೆ.

" ಇಲ್ಲಿದ್ದೇನೆ!" ರಾಮಚಂದ್ರ ಭುಜ ತಟ್ಟುತ್ತಾನೆ.

"ಡೆಹರಿ-ಓನ್-ಸೋನ್ ಪತ್ರ ಮುಟ್ಟಿದೆಯೇ ? "

" ಮುಟ್ಟಿದೆ. ವಸತಿ ಗೃಹಕ್ಕೆ ನಡೆಯಿರಿ"

.... .... .... .... .... .... .... .... .... .... .... .... .... .... ....

ನಾವು ಕಳೆದ ಶುಕ್ರವಾರ ಇಲ್ಲಿಗೆ ಬಂದು ಇಲ್ಲಿಂದಲೇ ಡೆಹರಿ-ಓನ್-ಸೋನ್‌ಗೆ ಕಲಕತ್ತಾ ಮಾರ್ಗವಾಗಿ ಹೋಗಿದ್ದೆವು. ಅಂದು ಬೇರೊಂದು ನಿಮಿತ್ತ ನಿಲ್ದಾಣಕ್ಕೆ ಬಂದಿದ್ದ ರಾಮಚಂದ್ರನಿಗೆ ಐವರು ನಮ್ಮವರು ಪಂಚಿ

ತರಾಗಿದ್ದರು. ಅಂದು ಅವಸರವಿತ್ತು. ಮರಳಿ ಬರುವಾಗ ಉಳಿದು ಕಂಡು ಹೋಗುವ ಮಾತು ಕೊಟ್ಟದ್ದೆವು. ಮಾತಿನಂತೆ ಬಂದಿದ್ದೇವೆ. ರಾಮಚಂದ್ರ ಬಿಡುವು ಮಾಡಿಕೊಂಡು ನಮ್ಮೊಡನೆ ಉಳಿದಿದ್ದಾನೆ.

ನಮ್ಮವರು ಊಟೋಪಚಾರ ಮುಗಿಸಿ, ತಾವೇ ಮುಂಬಯಿ ವಿಹಾರಕ್ಕೆ ಹೊರಟರು. ರಾತ್ರಿ ಯಾರಿಗೂ ಊಟ ಬೇಕಿರಲಿಲ್ಲ. ರಾಮಚಂದ್ರನು ಸ್ನೇಹದ ಮಾತುಕತೆಗೆ ನನ್ನನ್ನು ಕೋಣೆಯಲ್ಲಿಯೇ ಉಳಿಸಿಕೊಂಡನು. ರಾಮಚಂದ್ರನು ಮಾತಿಗೆ ಪೀಠಿಕೆ ಹಾಕಿದನು:

" ಸ್ವಾಮೀ ! ಇಲ್ಲಿಂದ ಡೆಹರಿಗೆ ಕಲಕತ್ತಾ ಮಾರ್ಗವಾಗಿ ಹೋಗಿದ್ದಿರಿ! ಬರುವಾಗ ನೇರವಾಗಿ ಅಲಹಾಬಾದ ಮಾರ್ಗವಾಗಿ ಬಂದಿದ್ದೀರಿ ! "

" ನಾವು ಕರೆದೊಯ್ದ ಬಾಲಕ ಹರಪ್ರಸಾದ ಬಾಲಿಕೆ ಸುಂದರಾ ಅವರ ಮನಸ್ಸಿನಂತೆ ಹಾಗೆ ಮಾಡಿದೆವು. ಇವರನ್ನು ವರ್ಷಗಳ ಹಿಂದೆ ಅಪಹರಿಸಿದ ಸಾಧುಗಳ ತಂಡದ ಕೇಂದ್ರವು ಮೊಗಲ್-ಸರಾಯಿಯಲ್ಲಿ ಇಂತಹ ಅಪಹರಣದ ಪ್ರಕರಣಗಳಿಂದ ಪಾರಾಗಲು ಸಂಬಂಧಿಸಿದ ಅನೇಕ ಬಂಧು ಮಿತ್ರರನ್ನು ಚಿತ್ರಹಿಂಸೆಗೆ ಗುರಿಮಾಡಿದ್ದನ್ನು ಈ ಮಕ್ಕಳು ಪ್ರತ್ಯಕ್ಷ ನೋಡಿದ್ದರು. ಅಂತೆಯೇ ಸುತ್ತು ಹಾಕಿ ಅವರನ್ನು ಕರೆದೊಯ್ದೆವು. "

" ಸರಿ! ಈ ಡೆಹರಿ-ಓನ್-ಸೋನ್ ಎಲ್ಲಿ ? ಕರ್ನಾಟಕದ ನೀವೆಲ್ಲಿ ? ಇದೇನು ಅದ್ಭುತ ? " ನಮ್ಮ ಪ್ರವಾಸ ಅದ್ಭುತವೆಂದು ರಾಮಚಂದ್ರ ಬಣ್ಣಿಸುತ್ತಾನೆ-

"ರಾಮಚಂದ್ರ ! ನಮ್ಮ ಸಾಹಸ ಯಾವ ಗಿಡದ ತೊಪ್ಪಲು ! ಆ ಹಸು ಮಕ್ಕಳು ಈ ದೇಶವನ್ನೇ ಅಪರಿಚಿತರ ಕಹಿ ಸಹವಾಸದಲ್ಲಿ ಸುತ್ತಿದ್ದಾರೆ. ಅದು ಅದ್ಭುತ "

"ಕಹಿ ಸಹವಾಸ? "

" ಹಾಂ! ಹಾಂ! ಕಹಿ! ಕಟು! ನಿರ್ದಯಿ! ಯಾವ ವಿಶೇಷಣವೂ ಆ ದುಷ್ಟರ ಸಹವಾಸದ ಕ್ರೌರ್ಯವನ್ನು ಯಥಾರ್ಥವಾಗಿ ಬಣ್ಣಿಸದು. "

" ನಿಮ್ಮೊಡನೆ ಒಬ್ಬ ನೀಳ್ಗೂದಲಿನ ಸಾಧುವನ್ನು ನೋಡಿದಂತಿದೆ. ನಿಮ್ಮ ಜೊತೆಗೆ ಅವನೂ ಕಲಕತ್ತೆಗೆ ಬಂದನಲ್ಲ ? "

" ಅದೂ ನಿಜ. ಆ ಕಥೆಯೇ ಬೇರೆ. "

" ಇದೇನು ! ಒಂದು ಚಿಕ್ಕ ಹೊತ್ತಿಗೆಯನ್ನೇ ನಾವು ಬಿಚ್ಚಿ ನೋಡು ವಂತಿದೆ. "

" ಸತ್ಯವು ನನ್ನ ಎದುರಿಗೆ ಬಹು ವಿಸ್ಮಯಕಾರಿಯಾಗಿ ಈ ಮಕ್ಕಳ ಜಟಿಲ ಸಮಸ್ಯಾ ಪರಿಹಾರ ಕಾಲದಲ್ಲಿ ಮೈದೋರಿತು. ಈಗ ಸಾವಕಾಶವಾಗಿ ಸವಿಗನಸಾಗುತ್ತಿದೆ. ಪರಿಹಾರದ ಅನಂತರ ಸತ್ಯವು ಪುನಃ ಹಿರಣ್ಮಯ ಪಾತ್ರೆಯಲ್ಲಿ ವಿಶ್ರಾಂತಿ ಪಡೆಯುವದು. ಸತ್ಯದ ಸ್ಮೃತಿ ಶ್ರುತಿ ಗುಚ್ಛವೇ ಈಗ ಭಾವ ಕಥೆಯಾಗಿ ನನ್ನಿಂದ ನಿನ್ನೆದುರು ನಿರೂಪಣೆಯಾಗುತ್ತಿದೆ. "

" ಸ್ವಾಮಿ ! ಈಗ ಪೂರ್ವಭಾವಿಯಾಗಿರುವ ಸತ್ಯವು ನಿನ್ನ ಅಂತ ರಂಗದಲ್ಲಿನ್ನೂ ವಿರಾಜಮಾನವಾಗಿದೆ. ಅದನ್ನು ಸೂತ್ರರೂಪವಾಗಿ ಹೇಳಿದರೆ, ನನಗೆ ನಿನ್ನ ಭಾವಕಥೆಯ ರಸಾನಂದವು ಮಾನವೀಯ ನ್ಯಾಯ ದಾನವಾಗು ವದು. ಉದ್ದೇಶ ಹೀನ ಸಾಹಿತ್ಯ ಪೈಶಾಚಿಕದ ಸಾಮೀಪ್ಯದ ಮೇರೆಯಲ್ಲಿ ಸಂದೇಹಿಯಾಗಿಯೇ ಸುತ್ತುವದು. ಕಾರಣ, ಮಾನವ ಕುಲದಲ್ಲಿ ಅನ್ಯಾ ಯವು ಇನ್ನೂ ರಕ್ತಸತನದಿಂದ ಮಾನವರನ್ನು ಪೀಡಿಸುತ್ತಿರುವದರ ಗುಟ್ಟನ್ನು ಬಿಡಿಸಿ ಹೇಳು. "

" ಅನ್ಯಾಯ ನಿವಾರಣೆಗೆ ನಾವೂ ನಮ್ಮ ಪೂರ್ವಜರೂ ಕಂಡು ಹಿಡಿದ ಕಟ್ಟಳೆಗಳು ಕಟ್ಟುಪ್ಪಣೆಗಳು ಶಿಥಿಲಗೊಂಡು ನಾಮಧಾರಿಯಾಗಿರುವದೇ ಕಾರಣ. "

" ಹೊಸ ನಿರ್ಮಾಣಕ್ಕೆ ಅಭ್ಯಂತರವಿಲ್ಲವಲ್ಲ. "

" ಏಕಿಲ್ಲ, ಹೊಸದಕ್ಕೆ ಹಳೆಯದು ಹಾದಿಯನ್ನೇ ಬಿಡುವದಿಲ್ಲ. "

" ಹಳೆಯದನ್ನು ಕಿತ್ತಿ ಸೆಯಬೇಕು. "

" ಕಿತ್ತಿ ಸೆಯುವ ಧೀರರಿಗೆ ತಿಳಿವಳಿಕೆ ಬೇಕಲ್ಲ. "

" ತಿಳಿಸಿಕೊಡಬೇಕು " !

" ಯಾರು ? ತಿಳಿಸುವ ಅವರೇ ತಿಳಿವಳಿಕೆಯ ಸರ್ವಾಧಿಕಾರಿಗಳಾಗಿ ದೇವರನ್ನು ಮರೆಸುತ್ತಾರೆ. "

"ಈಗ ನಮ್ಮ ಸ್ಥಿತಿ ಹೇಗಿದೆ ಎನ್ನುವಿ ? "

" ಸೈನಿಕರ ಸಾಮೂಹಿಕ ಶಿಕ್ಷಣವನ್ನು ನೋಡಿರುವಿಯಾ ? "

"ಅಹುದು! "

" Mark Time ನೋಡಿದ್ದೀಯಾ ? "

" ಹಾಂ! ಸೈನಿಕರು ನಿಂತಲ್ಲಿಯೇ ಹೆಜ್ಜೆ ಬಡಿಯುತ್ತಾರೆ "

" ಏಕೆ ? "

" ಹೊಸಬರು ಅನೇಕರು, ಹಳಬರು ಕೆಲವರು, ಸಾಮೂಹಿಕದಲ್ಲಿ ತಪ್ಪುತ್ತಾರೆ. ತಪ್ಪಿದವರು, ಕೂಡಿಕೊಂಡರು ಎಂಬ ಸಮತೆ ಸೈನ್ಯದಲ್ಲಿ ಬೇಕಾಗುತ್ತದೆ."

"ಅದೇ ರೀತಿ ನಮ್ಮ ಕುಲದಲ್ಲಿ ಈಗ Mark Time ನಡೆದಿದೆ. ಒಂದಿಲ್ಲೊಂದು ದೇಶ, ಕುಲ, ತಂಡ, ಪಂಗಡ ತಪ್ಪು ಹೆಜ್ಜೆ ಹಾಕುತ್ತಲೇ ಇವೆ. Mark Time ನಡೆದೇ ಇದೆ. ಅನುಭಾವಿಗಳು 'March Forward ! ನಡೆ ಮುಂದೆ' ! ಆಜ್ಞೆಯನ್ನು ಕೊಡಲು ದೇವರಿಂದ ಪ್ರೇರಣೆಯನ್ನು ಪಡೆದಿಲ್ಲ"

"ಮುಂದೆ ಗತಿ ? "

" ಕಲ್ಕಿಯ ಅವತಾರ! "

" ಸ್ವಾಮಿ! ನನಗೆ ತಿಳಿಯುವ ಭಾಷೆಯಲ್ಲಿ ಹೇಳು ! "

" ಇದೇ ಕಲ್ಕಿ ! ಪ್ರತಿಯೊಬ್ಬ ಮಾನವ ಈ ತಿಳಿದುಕೊಳ್ಳುವ ದೀಕ್ಷೆ ಪಡೆ

ಯಬೇಕು ಪ್ರತಿ ಗಂಡು, ಪ್ರತಿ ಹೆಣ್ಣು ರುದ್ರ ಶಕ್ತಿಯ ಅವತಾರವಾಗಬೇಕು. ಉದ್ಧರೇತ್ ಆತ್ಮನಾ ಆತ್ಮಾನಾಂ ! ''

" ವ್ಯಕ್ತಿ ವ್ಯಕ್ತಿತ್ವಕ್ಕೆ ಸೀಮಿತವಾದರೆ, ಮಾನವ ಕುಲದ ಪ್ರ—ಗತಿ ಸಾಧ್ಯವಾದೀತೆ ? ಸ್ವಾರ್ಥ ಬಲಶಾಲಿಯಾಗಿ ಸರ್ವಾರ್ಥ ಸಿದ್ಧಿ ಮಣ್ಣುಗೂಡ ಲಿಕ್ಕಿಲ್ಲವೇ ? "

'' ವ್ಯಷ್ಟಿ ಸಮಷ್ಟಿಯ ಕ್ಷೇತ್ರ ಜ್ಞಾನವೇ ಅತಿಮಾನವತೆಯ ಪ್ರಥಮ ಅವಸ್ಥೆ. ''

" ಜೀವನದಾಚೆಗೆ ಸರ್‍ರನೆ ನಮ್ಮ ಈ ಮನೋರಥವನ್ನು ಸಾಗಿಸುತ್ತಿರುವಿಯಲ್ಲ! ''

'' ಆದರ್ಶದ ಪರಿಜ್ಞಾನವಿದ್ದರೇ ಸಾಧನೆಯ ಇತಿಮಿತಿ ಪ್ರಗತಿಯ ಪರಿಚಯವಾಗುತ್ತದೆ. "

'' ಸ್ವಲ್ಪ ನಿಧಾನವಾಗಿ ಸಾಗಲಿ. ಆಗ, ದೇವರನ್ನು ಮರೆಸುವ ಮಾತು ಹೇಳಿದೆಯಲ್ಲ. ಅಲ್ಲಿಂದ ಮುಂದೆ ಬಾ. ''

'' ನೀನು ಅನ್ಯಾಯದ ಮಾತು ಹೇಳಿದಿ. ಅಂತೆಯೆ ದೇವರ ನೆನಪು ಬಂದಿತು. ವಿಶ್ವದಲ್ಲಿ ಅನ್ಯಾಯ ಪರಿಮಾರ್ಜನೆಯ ಪರಿಪೂರ್ಣ ಅಧಿಕಾರವು ದೇವರಿಗೊಬ್ಬನಿಗೇ ಇದೆ. ಮದಾಂಧ ಸರ್ವಾಧಿಕಾರಿ ಈ ಅಧಿಕಾರವು ತನ್ನದೆನ್ನುತ್ತಾನೆ ''

'' ಆಗ ಸಂಘರ್ಷವು ಪ್ರಾರಂಭವಾಗುತ್ತದೆ. ಶೀತಲ ಯುದ್ಧ ಪ್ರತ್ಯಕ್ಷ ಯುದ್ಧಗಳು ಮಾನವ ಕುಲ ಕ್ಷಯಕ್ಕೆ ಕಾರಣವಾಗುತ್ತವೆ. ''

'' ಹಾಂ ! ಈಗ ಹಾದಿಗೆ ಬಂದಿರುವಿ ರಾಮಚಂದ್ರ ! ನಿರ್ಮಲ ಚಿತ್ತದಿಂದ ದೇವರು ಕೊಟ್ಟ ಬುದ್ಧಿಯಿಂದ ಸಂತರು ಅನುಭಾವಿಗಳು ಜ್ಞಾನಿಗಳು ವಿಜ್ಞಾನಿಗಳು ನಿರೂಪಿಸಿದ ಕಟ್ಟಳೆ ಕಟ್ಟುಪ್ಪಣೆಗಳನ್ನು ಪಾಲಿಸುವ ನಿಷ್ಠೆಯು ನಾಗರಿಕ ಜೀವನದಲ್ಲಿ ಬಂದರೆ ಅತಿಮಾನವತೆಯ ಅವಸ್ಥೆಗೆ ಹಂಬಲಿಸುವ ಸಾಧಕರಾಗಲು ಸಕಲ ಮಾನವರಿಗೆ ಸಾಧ್ಯವಾದೀತು. "

"ಸ್ವಾಮಿ ! ಮಾನವರಲ್ಲಿ ಈಗ ಈಶ್ವರ ನಿರೀಶ್ವರವಾದಿಗಳು, ಆಸ್ತಿಕರು-ನಾಸ್ತಿಕರು ಇದ್ದಾರೆ. ನಿನ್ನ ಸೂತ್ರ ಈರ್ವರಿಗೂ ಹೇಗೆ ಅನ್ವಯಿಸೀತು!"

"ರಾಮಚಂದ್ರ ! ಸ್ವಲ್ಪ ಹೊತ್ತು ದೇವರನ್ನು ಮರೆತುಬಿಡು. ಈ ವಾದಿಗಳು ಎಲ್ಲರೂ ಮಾನವರೇ. ಎಲ್ಲರಿಗೂ ಹೃದಯ ಎನ್ನುವ ಶಾರೀರಕ ಅಂಗವು ಇದ್ದೇ ಇದೆ. ಇದು ಕ್ರಿಯೆಯನ್ನು ನಿಲ್ಲಿಸುವದೆಂದರೆ ನಾಸ್ತಿಕ ಭಾವವೋ ಪೈಶಾಚಿಕವೋ ? "

"ನೀನೇ ಹೇಳು. ಈಗ ಕ್ಲಿಷ್ಟ ಗಹನ ವಿಚಾರ ಮಂಥನದಲ್ಲಿ ನನ್ನನ್ನು ಬಂಧಿಸಿದ್ದೀಯಾ! "

"ಪ್ರಾಣವಿರುವ ಮನುಷ್ಯಪ್ರಾಣಿ. ಪ್ರಾಣಾಧಾರವಾಗಿರುವ ಹೃದಯದ ಗುಹ್ಯಜ್ಞಾನವನ್ನು ತಿಳಿಯದಿದ್ದರೆ, ಇಂದಿನ ಭೌತಿಕವಾದಿಗಳ ವೈಜ್ಞಾನಿಕ ಸಾಧನೆಯನ್ನು ಅಲ್ಲಗಳೆದಂತಾಗುವದಿಲ್ಲವೇ ? "

"ಅಹುದು. ಈ ಜ್ಞಾನ ನಮಗೆ ಬೇಕು. "

"ರಾಮಚಂದ್ರ ! ಸಹಸ್ರಾರು ವರ್ಷಗಳಿಂದ ನಮ್ಮವರು ಈ ಜ್ಞಾನಾರ್ಜನೆ ಮಾಡಿಯೇ ಇಂದಿನ ಅಣುಯುಗದ ಮಹಾದ್ವಾರದಲ್ಲಿ ನಮ್ಮನ್ನು ನಿಲ್ಲಿಸಿದ್ದಾರೆ. ಪ್ರಾಣಕ್ಕಿರುವಂತೆ ಹೃದಯಕ್ಕೂ ಮುಖ್ಯ ಎರಡು ಕ್ರಿಯೆಗಳಿವೆ. ಒಂದು ಪ್ರಾಕೃತ, ಇನ್ನೊಂದು ಸಚೇತನ. ಎರಡೂ ಪರಸ್ಪರ ಪೂರಕ. ಇಂದು ಪ್ರಾಕೃತದಲ್ಲಿ ನಿಂತು ನಾವು ಹೆಜ್ಜೆ ಬಡಿಯುತ್ತಿದ್ದೇವೆ. "

"ಸ್ವಾಮಿ ! Wonderful ! ನಿಜವಾಗಿ ಅಲೌಕಿಕ ಆನಂದ ಆಶ್ಚರ್ಯಗಳ ಅತಿಮಾನವತೆಯ ಸೃಷ್ಟಿಯಲ್ಲಿ ನಮ್ಮನ್ನು ಕರೆದೊಯ್ಯುತ್ತಿರುವಿ. ದಯವಿಟ್ಟು ಮುಂದೆ ಸಾಗಲಿ. "

"ದಯವೇ ಧರ್ಮದ ಮೂಲವಯ್ಯ. ದಯೆಯಿಡುವದು ಇಂದು ಉಪಚಾರದ ಮಾತು ಮಾತ್ರವಾಗಿದೆ. ದಯೆಯು ಕ್ರಿಯೆಯಲ್ಲಿಲ್ಲ. ಹೃದಯವು ಅರ್ಧ ಕ್ರಿಯೆ ನಡೆಸಿರುವದೇ ಇದಕ್ಕೆ ಕಾರಣ. ತಿಳಿದವರು ತಿಳಿಯದವರಿಗೆ ತಿಳಿಸುವದೇ ದಯೆ. ಉಳ್ಳವರು ನಿರ್ಗತಿಕರಿಗೆ ತಮ್ಮಲ್ಲಿ ತುಂಬಿ ತುಳುಕುತ್ತಿರುವದನ್ನು ನೀಡಿ, ಅವರನ್ನು ಗತಿಗಾಣುವಂತೆ ಮಾಡುವದೇ ದಯೆ. ಇದನ್ನು

ನಾಸ್ತಿಕನೂ ಆಸ್ತಿಕನೂ ದೇವರ ಗೋಷ್ಠಿಗೆ ಹೋಗದೇ ಮಾಡಿದರೆ ದೇವರು ಯಾರ ಮೇಲೆಂದೂ ಮುನಿಸಿಕೊಳ್ಳುವದಿಲ್ಲ. ಕಾಮಯೇ ದುಃಖ ತಪ್ತಾನಾಂ ಪ್ರಾಣಿನಾಂ ಆರ್ತಿನಾಶನಂ! ಈ ಮಂತ್ರವನ್ನು ಲೆನಿನ್, ಲೂಥರ, ಲಿಂಕನ್, ಗಾಂಧಿ, ಬುದ್ಧ, ಬಸವ, ಸಂತ ಕ್ರಿಸ್ತ, ಪ್ರವಾದಿ ಮಹಮ್ಮದ, ಕಬೀರ, ಕೆಮಾಲಪಾಶಾ, ಸನ್ಯತ್ ಸೇನ್, ರಸ್ಕಿನ್, ಟಾಲಸ್ಟಾಯ್, ಎಲ್ಲ ದೇಶದ ಕಾರಣ ಪುರುಷರು ಸಂತರು ಶರಣರು ಅನುಭಾವಿಗಳು ಅವರವರ ಜನರಿಗೆ ತಿಳಿಯುವ ಭಾಷೆಯಲ್ಲಿ ಹೇಳಿದ್ದಾರೆ.

"ಕ್ರಾಂತಿಯನ್ನೋ ಪರಿವರ್ತನೆಯನ್ನೋ ಸಾಧಿಸಿದ್ದಾರೆ. ಕೆಲವರು ದೇವರನ್ನು ಸ್ಮರಿಸಿರಬಹುದು. ಕೆಲವರು ತಮ್ಮ ನಿರ್ವ್ಯಾಜ್ಯ ಸಿದ್ಧಾಂತಗಳನ್ನೇ ಆದರ್ಶವನ್ನಾಗಿರಿಸಿಕೊಂಡಿರಬಹುದು. ಇಂತಹ ತತ್ವನಿಷ್ಠರು ನಾಸ್ತಿಕರಾಗುವಷ್ಟು ಹಿಂದಿನ ಆಸ್ತಿಕರು ದೇವರನ್ನು ಮರೆತು ಸರ್ವಾಧಿಕಾರಿಗಳಾಗಿ ಜನಸಾಮಾನ್ಯರನ್ನು ಶೋಷಣೆ ಮಾಡಿದ್ದಾರೆ. ಅದೊಂದು ಇತಿಹಾಸ. ಅದರ ವಿಶ್ಲೇಷಣೆ ಈಗ ಬೇಡ. ಆದಿಭೌತಿಕ ಆಧ್ಯಾತ್ಮಿಕ ಇವೆರಡೂ ಒಂದೇ ಮಹಾ ಚೈತನ್ಯದ ಇಮ್ಮುಖಗಳು. ಸಂಬಂಧಿಸಿದ ಸಿದ್ಧಾಂತಿಗಳು ಆಸ್ತಿಕ್ಯ ನಾಸ್ತಿಕ್ಯ ಭಾವಕ್ಕನುಸರಿಸಿ 'ಪಾರಿಭಾಷಿಕ' ಶಬ್ದಗಳನ್ನು ಉಪಯೋಗಿಸಿದ್ದಾರೆ. ಆದರೆ ಶಬ್ದ ಸಾಂಕರ್ಯವಾಗಿ ಭಗವದ್ಗೀತೆಯಲ್ಲಿ ಹೇಳಿರುವಂತೆ ನಾವು ಪುನಃ ಪುನಃ ಮಹಾಯುದ್ಧಗಳಿಗೆ ಇಂದು ಆಹುತಿಯಾಗುತ್ತಿದ್ದೇವೆ."

"ಒಂದು ಗಳಿಗೆ ನಿಲ್ಲಿಸು ಸ್ವಾಮಿ! ಎಂತಹ ಅಮೃತ ಗಳಿಗೆಯಲ್ಲಿ ದೇವರು ನನ್ನನ್ನು ನಿನ್ನ ಸಹವಾಸದಲ್ಲಿ ಇಂದು ಉಳಿಸಿದ್ದಾನೆ. ಇದೇ ದೇವರ ಕೃಪೆಯಿರಬೇಕು. ಅರವಿಂದರು ಬಾರಿಬಾರಿಗೆ ದೇವರ ಕೃಪೆ ಮಾನವರಿಗೆ ಬೇಕೆಂದಿದ್ದಾರೆ. ಇಂದು ಇಷ್ಟು ದೇವರ ಸ್ಮರಣೆ ಸಾಕು. ನಿತ್ಯ ಸ್ಮರಣೆ ಇನ್ನು ಬೇಕೇ ಬೇಕೆಂದು ನಿರ್ಧರಿಸಿದ್ದೇನೆ. ಸಮಯವನ್ನೂ ನಿಶ್ಚಯಿಸುತ್ತೇನೆ. ಪ್ರಗತಿಯನ್ನೂ ನಿನಗೆ ಪತ್ರ ಬರೆದು ತಿಳಿಸುತ್ತೇನೆ. ಇನ್ನಷ್ಟು ದಯೆಮಾಡು."

"ರಾಮಚಂದ್ರ! ನನಗೆ ಕೋಡುಗಳನ್ನು ಹಚ್ಚಿ ಪುನಃ ಪಶುವರ್ಗ

ದಲ್ಲಿ ಕಳಿಸಬೇಡ. ಆ ಎರಡು ಮಕ್ಕಳ ಪ್ರಕರಣಗಳು ನನ್ನ ಸರ್ವಾಂಗಗಳಲ್ಲಿ ಚೈತನ್ಯವನ್ನು ಉಕ್ಕಿಸಿದ್ದರಿಂದಲೇ ನನ್ನ ನಿರೂಪಣೆ ಇಷ್ಟೊಂದು ಪರಿಣಾಮ ಕಾರಿಯಾಗಿರಬೇಕು. ನಾವು ಮಹಾಯುದ್ಧದ ಮುಮ್ಮುಖದಲ್ಲಿದ್ದೇವೆ ಅಲ್ಲವೆ? " "ಅಹುದು. ಶಬ್ದ ಸಂಕರದ ಪರಿಣಾಮದಲ್ಲಿದ್ದೆವು." "ಈ ಶಬ್ದದ ಸುಂಕು ಮಂಕು ಬೇಡವಾದರೆ, ಶಬ್ದವು ಅಲ್ಲಮಪ್ರಭು ಹೇಳಿರುವಂತೆ ಚಿರಂತನ ಜ್ಯೋತಿರ್ಲಿಂಗವಾಗಬೇಕು. ಈ ಮೃತ್ಯುಂಜಯ ಜ್ಯೋತಿರ್ಲಿಂಗ ಸಾಧನೆಯನ್ನು ರಶಿಯದ ಸಾಮ್ಯವಾದಿಗಳೂ ಅಮೇರಿಕೆಯ ಧನವಾದಿಗಳೂ ಆಂಗ್ಲೇಯ ಜನತಾ ಪ್ರಭುತ್ವವಾದಿಗಳೂ, ಈಗೀಗ ಸಮಾಜವಾದಿ ಜನತಾ ಪ್ರಭುತ್ವದ ಸಾಧನೆಯಲ್ಲಿರುವ ಭಾರತೀಯರೂ ಅವರವರ ಸಂಘಟನಾ ಸಾಮರ್ಥ್ಯಾನುಸಾರ ಬಹುಮಟ್ಟಿಗೇ ಕೆಲಮಟ್ಟಿಗೇ ಸಾಧಿಸಿದ್ದಾರೆ. ಈ ಸಾಧನೆಯು ಸಮಸ್ತ ಮಾನವ ಕುಲದ ಪ್ರತಿಯೊಂದು ಪಿಳ್ಳೆಗೂ ಅನ್ವಯಿಸುವಂತೆ ಎಡೆಬಿಡದ ಭವ್ಯ ಯೋಜನೆಯನ್ನು ಸಮಗ್ರವಾಗಿ ಪರಿಪೂರ್ಣವಾಗಿ ರೂಪಿಸಿ ಅನ್ವಯಿಸಬೇಕೆಂದು ಮಹರ್ಷಿ ಅರವಿಂದರು ಘೋಷಿಸಿದ್ದಾರೆ. ಆ ಘೋಷಣೆಯೊಂದೇ ಇಂದು ಮಾನವ ಕುಲದ ಅಭ್ಯುತ್ಥಾನಕ್ಕೆ ಮಾರ್ಗದರ್ಶನ ಮಾಡಬಲ್ಲದು. ಈ ಅಭಿಜಾತ ಸಂಘಟನೆಯನ್ನು ಮಾಡಲು ಮೂಲತಃ ಯೋಜಕರು ಒಂದು ಕಾರ್ಯವನ್ನು ಈಡೇರಿಸಬೇಕು!"

"ಅದೇನು !"

"ಜೀವನದ ವಿವಿಧ ಕ್ಷೇತ್ರಗಳ ಸಮನ್ವಯ ಸಂಯೋಜನೆ. ಪ್ರತ್ಯೇಕತೆ ಮಾನವ ವಿರೋಧ ಎಂಬ ಶಾಸನ ನಿರ್ಮಾಣವಾಗಬೇಕು. ರಾಜ್ಯಕೀಯ, ಧರ್ಮ, ವಿಜ್ಞಾನ, ಕಲೆ, ವಾಣಿಜ್ಯ ವಿವಿಧ ಶಾಸ್ತ್ರಗಳು, ಲಭ್ಯ ವಿಶ್ವಜ್ಞಾನ, ಕೃಷಿ, ಶ್ರಮಜೀವನ, ಶಿಲ್ಪ, ನಾಟ್ಯ, ನೆಯ್ಗೆ, ಗೋಪಾಲತನ, ಭೂಪಾಲತನ, ಇವೆಲ್ಲ ಕ್ಷೇತ್ರಗಳನ್ನು ಸೂತ್ರಬದ್ಧವಾಗಿ ಹಿಡಿದಿಟ್ಟಿರುವ ಸಂವಿಧಾನ-ಸಂಘಟನೆಗಳಿಂದ ವೃತ್ತಿ ಸಂಘದ (Trade Union) ರೀತಿಯಲ್ಲಿ ಸಂಘಟಿಸಬೇಕು. ಹಿಂದಿನ ಸಂವಿಧಾನಗಳಲ್ಲಿ ಇವೆಲ್ಲವೂ ಸಾಮ್ಯರೂಪವಾಗಿವೆ. ಈ ಜ್ಞಾನವನ್ನು ಶಿಕ್ಷಣದಿಂದ ಜನಸಾಮಾನ್ಯರಿಗೆ ಅರುಹಬೇಕು. ಈ ಕ್ಷೇತ್ರಗಳಲ್ಲಿ ಅಧಿಕಾರಾರೂಢ ಪರಂಪರಾನುಗತ ಮದಾ(ತಾ)ಂಧತೆಗಳನ್ನು

ಶಾಸನದಿಂದ ತಗ್ಗಿಸಬೇಕು. ಅವು ತಮ್ಮ ಮರ್ಯಾದೆಯನ್ನರಿತು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಗೌರವದಿಂದ ತ್ರಿಕರಣ ಪೂರ್ವಕವಾಗಿ ಇತರರಿಗೆ ಭಾರವಾಗದಂತೆ ಸ್ವಾವಲಂಬನೆಯ ಸಂಪಾದನೆಯಲ್ಲಿ ಆಗ ತಲ್ಲೀನವಾಗುತ್ತವೆ. ತಪಸ್ವಿಗಳು ಹೇಳುವ ಸರ್ವೋದಯವು ಇದೇ. ಇದನ್ನೇ ಜ್ಞಾನಿಗಳು ಸರ್ವತೋಮುಖ ಅಭಿವೃದ್ಧಿ ಸರ್ವಾಂಗೀಣ ಉನ್ನತಿಯೆಂದೂ ತತ್ವಜ್ಞಾನಿಗಳು ಪೂರ್ಣಯೋಗವೆಂದೂ, ಶರಣರು ಶೂನ್ಯ ಸಂಪಾದನೆಯೆಂದೂ ಸಂಬೋಧಿಸಿದ್ದಾರೆ. ಅಂತೆಯೆ, ಮೇಲೆ ಸೂಚಿಸಿದ ಶಾಸನ ರಚನೆಗೆ ಸರ್ವ ತತ್ವಗಳ ಸಜ್ಜನರಿಂದ ಸಮ್ಮತಿಯು ದೊರೆಯಲೇ ಬೇಕು. ”

“ ದೊರೆಯದಿದ್ದರೆ! ”

“ ಆ ಮಾತು ಬೇಡ. ಈ ಮಾತಿಗೆ ತಪ್ಪಿದರೆ ಮಾನವರು ಪ್ರಳಯ-ವಿಪ್ಲವಗಳಿಗೆ ಸಿದ್ಧರಾಗುವದೊಂದೇ ಹಾದಿ. ಅದು ನಾಗಾಸಾಕಾ-ಹಿರೋಶಿಮಾ ಹಿಡಿದ ಹಾದಿ. ”

“ ಅಂದರೆ ಮಾನವರೇ ವಿಪ್ಲವಕ್ಕೆ ಕಾರಣರಾಗುವರೇ ? ”

“ ಅಹುದು ! ಹುಟ್ಟಿಸಿದ ಮಹಾ ಚೈತನ್ಯ ಅಥವಾ ಪರಮಾತ್ಮ ಅಥವಾ ದೇವರು ತನ್ನ ನಿಯಮ ವಿರೋಧಿಯಾಗಿ ಇಂತಹ ಅಕಾಲಿಕ ದುರ್ಮರಣ ದುರಂತಗಳನ್ನು ಎಸಗುವನೇ? ನಾನು ಇಷ್ಟು ಕಾಲ ದೇವರ ಗೋಷ್ಠಿಗೆ ಹೋಗದೇ ಮಾನವ ವ್ಯವಸ್ಥೆಯ ಬಗೆಗೆ ಮಾತಾಡಿದ್ದೇನೆ. ದೈವೀ ನ್ಯಾಯ ವಿಧಾನವೇ ಬೇರೆ. ಅದು ಸಾರ್ವಭೌಮ ಅಧಿಕಾರ. ”

“ಅಂದರೆ ನಾವು, ಪ್ರಚಲಿತವಾಗಿ ನಮ್ಮ ಕಾರಣ ಪುರುಷರನ್ನೇ ನಂಬಿ ಮುಂದುವರಿಯಬೇಕಲ್ಲವೆ ? ”

“ ಕಲಿಯುಗದಲ್ಲಿ ದೇವರು ದಿಂಡರು ಶರಣರು ಸಂತರು ಎಲ್ಲರನ್ನು ಮೂಲೆಗುಂಪಾಗಿರಿಸಿ, ಜನತೆಗೇ ವಂದಿಸಿ ಕಾರ್ಯ ಮಾಡುವ ದಿನಗಳು ಬಂದಿವೆ. ಆದರೆ ವಂದನೆಗೆ ತಕ್ಕಹಾಗೆ ಜನತೆಯಲ್ಲಿ ಬುದ್ಧಿ ಪ್ರಜ್ಞೆಗಳು

ಅಂಕುರಿಸುವ ಕಾರ್ಯವನ್ನು ಮಾಡುವ ಪ್ರವೃತ್ತಿ ಬೆಳೆದು ಬಂದಿಲ್ಲ. ಈ ಯುಗಧರ್ಮವನ್ನು ನಾವು ಪಾಲಿಸಬೇಕು. ಇಲ್ಲವಾದರೆ, ಈಗ ಕಂಡಿರುವ ಬೆಳಕೇ ಭ್ರಷ್ಟಾಚಾರಿಗಳಲ್ಲಿ ಹಸ್ತಾಂತರವಾಗಿ ವ್ಯಭಿಚಾರದಿಂದ ಕತ್ತಲೆಯಾದೀತು. ಅರ್ಧಜ್ಞಾನ, ಅರ್ಧ ಸತ್ಯದ ಅರಿವು, ಮಾನವರಿಗೆ ಘಾತಕ. ಅವು ಅಧಿಕಾರದ ವ್ಯಾಮೋಹಕ್ಕೆ ಅವಕಾಶ ಮಾಡಿಕೊಡುವವು. ಅಧಿಕಾರವು ಅಜ್ಞರಲ್ಲಿ ಕೇಡಿನ ಬೀಡು. ಜ್ಞಾನಿಗಳೇ ಮಾನವ ಕಲ್ಯಾಣದ ವ್ಯವಹಾರ ಮಾಡಲು ಯೋಗ್ಯರು. ”

“ ಸ್ವಾಮಿ ! ನಿಜ! ನಿಜ! ವಿದ್ಯಾರಣ್ಯರು ಈ ಮಾತನ್ನು ಸಾರಿದ್ದಾರೆ! ಸಂದರ್ಭಾನುಸಾರ ನನಗೆ ಕೆಲವು ಮಹಾ ವಿಚಾರಗಳು ಅರ್ಥವಾದವು. ಭದ್ರವಾದ ತಾತ್ವಿಕ ನೆಲೆಗಟ್ಟಿನ ಮೇಲೆ ನಿಂತಿದ್ದೇನೆ. ”

“ ನಿನಗೆ ಒಂದು ರೀತಿಯ ಲಾಭ. ನನಗೆ ಇನ್ನೊಂದು ರೀತಿಯ ಲಾಭ ನನ್ನ ಭಾವಕಥೆಗೆ ಒಂದು ಸಮರ್ಥನೆಯ ಭಾಷ್ಯವನ್ನೇ ಸಿದ್ಧಪಡಿಸಿದಂತಾಯಿತು. ಸತ್ಯವನ್ನು ದಿವ್ಯ ದೃಷ್ಟಿಯಿಂದ ಪರಾಮರ್ಶಿಸಿ ಕಲಾವಿದನು ತನ್ನ ಭಾವಕಥೆಯನ್ನು ನಿರೂಪಿಸುತ್ತಾನೆ. ”

“ ನಿಜ. ನಿಜ. ಕೊನೆಯ ಪ್ರಶ್ನೆ. ನಿನ್ನ ಈ ಭಾವಕಥೆಯಲ್ಲಿ ದೇವರ ಲೀಲೆಯು ಪ್ರಕಟವಾಗುವದೇ ? ”

ಹೊರಗೆ ಸೂಚನಾ ಗಂಟೆಯಾಗುತ್ತಿದೆ. ತಂತಿ ಸಂದೇಶ ಬಂದಿದೆ. ಮೌನವಾಗಿ ಓದಿ ತೆಗೆದಿರಿಸಿದೆ; “ ರಾಮಚಂದ್ರ ! ದೇವರ ಲೀಲೆ ಪ್ರಕಟವಾಗಬೇಕು ! ಪರಿಣಾಮಕಾರಿ ಘಟನೆ ಬೇಕು ಅಲ್ಲವೆ ? ಕಥೆಯ ಕೊನೆಗೆ ಈ ಸಂದೇಶ ಓದುತ್ತೇನೆ. ಇದರೊಡನೆ ಗುರುದೇವ ರವೀಂದ್ರನಾಥ ಠಾಕೂರರ ಅಮರ ಕಾವ್ಯ ‘ಗೀತಾಂಜಲಿ’ಯ ೧೦೨ನೆಯ ಗೀತೆಯನ್ನೂ ಓದುತ್ತೇನೆ. ಆಗ ನಿನ್ನ ಇಚ್ಛೆ ಪೂರ್ಣವಾಗುವದು. ಆಗ ನಮ್ಮ ಐವರೂ ಬಂದಿರುವರು. ಅವರೂ ಸಂದೇಶಗಳ ಸುಖ ಪಡೆಯಲಿ. ಗುರುದೇವರು ಮಹಾನುಭಾವರು ನಮ್ಮ ದೇಶದ ಸಂತರ ದಿವ್ಯ ಪರಂಪರೆಯವರು. ಇಂತಹ ಸಂತರ ಶರಣರ ಪಾದಧೂಳಿಯ ಕಣದಲ್ಲಿ ಒಂದಂಶ ಮಾತ್ರನು ನಾನು. ನನ್ನಿಂದ ಹೆಚ್ಚು ನಿರೀಕ್ಷಿಸದೇ, ಸಖ್ಯದ ಸುಖವನ್ನೇ ದೊಡ್ಡದೆಂದು ಭಾವಿಸಿ, ಕಥಾಶ್ರವಣಕ್ಕೆ ಮನಸ್ಸು ಮಾಡು! ”

# "ಡೆಹರಿ—ಓನ್—ಸೋನ್"

## (೧)

ಅಂದು ಅವನನ್ನು ನಾನು ಆಕಸ್ಮಾತ್ತಾಗಿ ಕಂಡಾಗ ಅವನಿಗೆ ಹತ್ತು ವಯಸ್ಸಿನ ಎಳೆತನ. ಆದರೂ ಅವನಲ್ಲಿ ನಾನು ಕಂಡ ದಿಟ್ಟತನ ಅಚ್ಚರಿ ಪಡಿಸುವಂತಿತ್ತು. ನಾನು ಪ್ರೊಬೇಶನ್ ಆಫೀಸರ (ನಿರೀಕ್ಷಣಾಧಿಕಾರಿ) ನಾಗಿ ಕಾರ್ಯ ಮಾಡುತ್ತಿದ್ದ ನಗರ ದೊಡ್ಡ ರೇಲ್ವೆ ಜಂಕ್ಶನ್ ಸ್ಥಳ. ಈ ಹತ್ತು ವರುಷದ 'ಹರಪ್ರಸಾದ' ಅಂದು ರೇಲ್ವೆ ನಿಲ್ದಾಣದಲ್ಲಿ ಭವ್ಯವಾದ ಉಕ್ಕಿನ ಕಂಬಕ್ಕೆ ಆತುಕೊಂಡು ತನ್ನ ವಿಚಾರದಲ್ಲಿ ತಾನೇ ಮಗ್ನನಾಗಿ ನಿಂತಿದ್ದನು. ಮುಖದ ಮೇಲೆ ಯಾವುದೋ ಒಂದು ಅವ್ಯಕ್ತ ದೂರದ ಹಂಬಲದ ಸುಳಿವು ಹಾಯ್ದು ಹೋಯಿತು. ಅಷ್ಟೆ. ಅರಗಳಿಗೆಯಲ್ಲಿ ಹುಡುಗ ಪುನಃ ಎದೆಯೇರಿಸಿ ಮೊಗವೆತ್ತಿ ನಿಂತು ಸುತ್ತೂ ನೋಡಿದನು. ನನ್ನ ಅವನ ಕಣ್ಣು ತಾಕಲಾಡಿ ದವು. ಸರ್ರನೆ ಅವನು ಕಣ್ಣು ತಪ್ಪಿಸಿ ತನ್ನ ಗಾಡಿಯು ಬರುವಿಕೆಯ ಕಡೆಗೆ ಲಕ್ಷ್ಯವಿದ್ದವನಂತೆ ನಟಿಸಲು ಯತ್ನಿಸಿದನು. ನನ್ನ ಸಹಾಯಕ ಸೇವಕ 'ಬಸವಂತ'ನೂ ನನ್ನ ಕುತೂಹಲವನ್ನು ಕಂಡು ಆಗಲೇ "ಹುರಿ ಕಾಸು"ತ್ತಿದ್ದನು. ಅಷ್ಟರಲ್ಲಿ ಹರಪ್ರಸಾದನ ಗಾಡಿ ನಿಲ್ದಾಣದಲ್ಲಿ ಬಂದು

ಉಸ್ಸೆಂದು ನಿಂತಿತು. ಬಸವಂತನೂ ನಾನೂ ಹರಪ್ರಸಾದನನ್ನು ನ
ವಶಕ್ಕೆ ತೆಗೆದುಕೊಳ್ಳಲು ಮುಂದೆ ಸಾಗಿದೆವು. ಬಸವಂತನ ಕನ್ನಡ ಪ್ರಶ್ನೆ
ಹರಪ್ರಸಾದ ಸುಮ್ಮನೆ ಮುಖ ನೋಡಿ ಮುಂದಕ್ಕೆ ಹೊರಟನು. ನಾ
ಹೋಗಿ ಹಿಂದಿಯಲ್ಲಿ “ಛೋಟಾಭಾಯಿ” ಎಂದು ಕರೆದು ನಿಲ್ಲಿಸಿದೆನು.
ಬಾಲಕ ಸರಸರನೆ ನಾಲ್ಕು ಮಾತಿನಲ್ಲಿ ತಾನು ಮುಂದಿನ ನಗರಕ್ಕೆ ಹೊ
ಟಿರುವದಾಗಿಯೂ ತನ್ನ ಗಾಡಿ ಬಿಡುವ ಸಮಯವಾಗಿರುವದಾಗಿಯೂ ಹೇ
ದನು. ನಮಗೆ ಏನಾದರೂ ಬೇಕಾಗಿದ್ದರೆ ಕೂಡಲೆ ತಿಳಿಸಿ ಆತನಿಗೆ ಅವಕಾ
ಮಾಡಿಕೊಡಬೇಕೆಂದು ಒಳ್ಳೆ ನಯವಾದ ಹಿಂದಿಯಲ್ಲಿ ಹೇಳಿದನು. ಆ
ನಾವು ನೇರವಾಗಿ ಅವನ ಊರು ಯಾವುದು, ಅವನ ತಾಯಿ-ತಂದೆ ಯಾ
ಊರಿನಲ್ಲಿರುವರು, ಅವನು ಒಬ್ಬನೇ ಈ ಊರಿಗೆ ಬಂದುದೇಕೆ? ಹೀಗೆ ಕೇ
ದೆವು. ಅವನು ದಿಟ್ಟತನದಿಂದ, ಅದೇನೆಲ್ಲ ನಿಮಗೇಕೆ ಬೇಕು, ಬೇಕಾದರ
ತನಗೆ ಹೇಳುವ ಇಚ್ಛೆಯಿಲ್ಲವೆಂದು ತಿಳಿಸಿದನು. ಆಗ ನಾವೂ ನಮ್ಮ ಕಾಯ
ಪ್ರಾರಂಭ ಮಾಡಬೇಕಾಯಿತು. ಆದರೆ ನಮ್ಮ ಕಾರ್ಯ ಪದ್ಧತಿ ಬಹ
ಸೂಕ್ಷ್ಮವಾದುದು. ಎಳೆಯ ಮಕ್ಕಳ ಮನಸ್ಸಿನ ಮೇಲೆ ವಿಪರೀತ ಪರಿಣಾಮ
ವಾಗಿರಬಾರದು, ನಮ್ಮ ಕಾರ್ಯ ಮಾತ್ರ ಕೈಗೂಡಬೇಕು.

ನಾವು ಆತನಿಗೆ ಸ್ವಚ್ಛ ತಿಳಿಸಿದೆವು. ನಮಗೆ ಆತನ ಈ ಒಬ್ಬಂಟಿಗತ
ದಿಂದ ಸಂಶಯ ಬಂದಿದೆ. ಸಂಶಯ ನಿವಾರಣೆಗಾಗಿ ನಾವು ಆತನನ್ನು
ನಮ್ಮ ವಶಕ್ಕೆ ಕಾನೂನಿನ ಪ್ರಕಾರ ತೆಗೆದುಕೊಳ್ಳುತ್ತೇವೆ. ಹೊಣೆಗಾರ ರೀ
ಯಲ್ಲಿ ನಮಗೆ ಸಮಾಧಾನಕರ ಸಮಸ್ಯಾ ಪರಿಹಾರವಾಗುವ ತನಕ ಅವನು
ನಮ್ಮ “ರಿಮಾಂಡ ಹೋಮ” (ನಿರೀಕ್ಷಣಾಲಯ) ದಲ್ಲಿ ಇರಬೇಕಾಗುವದು
ಎಂದು. ಆತನು ನಮಗೆ ಪ್ರತಿಯಾಗಿ ಎಷ್ಟೋ ಮಾತುಗಳನ್ನು ಹೇಳಿದನು.
ತಾನು ಒಂದು ಅನಾಥಾಶ್ರಮದ ಕಾರ್ಯಕರ್ತರೊಂದಿಗೆ ಮುಂಬಯಿಯಿಂದ
ಇಲ್ಲಿಗೆ ನಿಧಿ ಸಂಗ್ರಹಕ್ಕಾಗಿ ಬಂದಿರುವದಾಗಿಯೂ, ಈ ಗುಂಪಿನ ಮುಖ್ಯಸ್ಥ
ಮುಂದಿನ ನಗರದ ಪ್ರವಾಸಿಗರ ಧರ್ಮಶಾಲೆಯೊಂದರಲ್ಲಿದ್ದು ತನ್ನ ಹಾದಿ
ಯನ್ನು ಕಾಯುತ್ತಿರುವದಾಗಿಯೂ ಹೇಳಿದನು. ತಾನು ಈ ರಾತ್ರಿ ಅಲ್ಲಿಗೆ

ಮುಟ್ಟೆ ಮುಖ್ಯಸ್ಥನಿಗೆ ಲೆಕ್ಕ ಒಪ್ಪಿಸದಿದ್ದರೆ ತಪ್ಪಿತಸ್ಥನಾಗುವದಾಗಿಯೂ ಬಹಳ ಹೇಳಿಕೊಂಡನು. ಆದರೆ ನಮ್ಮ ಮನಸ್ಸು ಕರಗಲಿಲ್ಲ. ಅಥವಾ-ನಾವು ಕರಗಿಸಿಕೊಳ್ಳಲಿಲ್ಲ ಎನ್ನಬಹುದು. ಬಸವಂತನ ಪಾತ್ರ ಪ್ರಾರಂಭವಾಯಿತು. "ಆಫೀಸರ" ಬಹಳ ಕಠೋರ. ಸುಮ್ಮನೆ "ಆಫೀಸರ" (ನಾನು) ಹೇಳಿದಂತೆ ಹರಪ್ರಸಾದ ಕೇಳುವದೇ ಒಳಿತು. ಎಂದು ಆ ಹುಡುಗನನ್ನು ಒಲಿಸಿಕೊಂಡು ಬಸವಂತ ರಿಮಾಂಡ ಹೋಮಿಗೆ ಹೊರಟನು. ಹಿಂದೆಯೇ ಹತ್ತು ನಿಮಿಷಗಳಲ್ಲಿ ನಾನು ಆಫೀಸಿಗೆ ಹೋಗಿ ಮಿಂಚುನೋಟದ ವಿಚಾರಣೆಯನ್ನು ಮಾಡಿದೆನು. ಹರಪ್ರಸಾದನು (ಈ ಬಾಲಕ) ಗಂಭೀರವಾದ ಮೌನದ ಹೊರತು ಮತ್ತಾವ ಪ್ರಸಾದವನ್ನು ನೀಡಲಿಲ್ಲ. ಆ ಮಾತು ಅಲ್ಲಿಗೇ ಬಿಟ್ಟು ನಾನು ಮನೆಗೆ ಹೋಗಿ ವಿಶ್ರಾಂತಿ ಹೊಂದಿದೆನು. ಈ ಎಳೆತನದ ಹಟವನ್ನು ಯಾವ ಒತ್ತಾಯವೂ ಹಾದಿಗೆ ತರುವದು ಸಾಧ್ಯವಿಲ್ಲವೆಂದು ನನ್ನ ಇಡೀ ರಾತ್ರಿಯ ವಿಚಾರಗಳ ತುಮುಲ ಯುದ್ಧದ ಪರಿಣಾಮವಾಯಿತು.

ಮರುದಿನ ಆಫೀಸಿಗೆ ಹೋಗಿ ಎಲ್ಲ ಕಾರ್ಯಕರ್ತರನ್ನು ಕರೆದು ಹರಪ್ರಸಾದನ ದೈನಂದಿಗಳ ಹೊರತಾಗಿ ಉಳಿದ ಅವನ ಗೃಹಸಂಬಂಧದ ವಿಷಯಗಳಲ್ಲಿ ಒತ್ತಾಯದ ವಿಚಾರಣೆ ಮಾಡಕೂಡದೆಂದು ತಿಳಿಸಿದೆನು.

ಹದಿನೈದು ದಿನ ನಾವು ಅವನ ಆಟ ಪಾಟ ಸಹಪಾಠಿಗಳೊಡನೆ ಅವನ ಸಹವಾಸ ಅವನ ಓದುಬರೆಹ ಅವನ ಊಟ ಉಡಿಗೆ, ಇವೇ ಮೊದಲಾದ ವಿಷಯಗಳ ನಿರೀಕ್ಷಣೆಯನ್ನು ಆತನಿಗೆ ಎಳ್ಳಷ್ಟೂ ಗೊತ್ತಾಗದಂತೆ ದೂರದಿಂದ ನಡೆಯಿಸಿದ್ದೆವು.

ಹದಿನೈದನೆಯ ದಿನ "ಪುಂದಿನ ನಗರ" ದಿಂದ ನಮ್ಮ ಅಲ್ಲಿಯ ಶಾಖಾ ಕಾರ್ಯಾಲಯವು ಉತ್ತರ ಬರೆದಿತ್ತು. ಅಲ್ಲಿ ಒಂದು ಮುಂಬಯಿ ಅನಾಥಾಶ್ರಮದ ಗುಂಪು ಬಂದಿದ್ದು ನಿಜ. ಆದರೆ ಆ ಗುಂಪಿನ ಮುಖ್ಯಸ್ಥನು ನಾವು ಇಲ್ಲಿ ಹರಪ್ರಸಾದನನ್ನು ಉಳಿಸಿಕೊಂಡ ದಿನವೇ ಅಲ್ಲಿಂದ ಮಾಯವಾಗಿಬಿಟ್ಟನು. ಇಂಥ ೮-೧೦ ಹುಡುಗರು ಪೂರ್ಣ ತಾವೇ "ಅನಾಥ"ರಾಗಿ ಆ ಊರಲ್ಲಿ ತಿರುಗಾಡುವಾಗ ಅಲ್ಲಿಯ ಆಫೀಸರರು ಅವರನ್ನು ಯಥಾಪ್ರಕಾರ

ಅಂದೇ ರಿಮಾಂಡಹೋಮಿಗೆ ಸೇರಿಸಿರುವದಾಗಿಯೂ ಹರಪ್ರಸಾದನ ಪೂರ್ಣ ಪರಿಚಯ ಆ ಹುಡುಗರಲ್ಲಿ ಯಾರಿಗೂ ಇಲ್ಲವೆಂದೂ ತಿಳಿದು ಬಂದಿತು. ಆ ಹುಡುಗರು ಎಂಟು ವಯಸ್ಸಿನೊಳಗಿನವರು. ನಮ್ಮ ಕೊನೆಯ ಆಶೆಯೂ ನಮ್ಮ ಕೈ ಬಿಟ್ಟಿತು. ನನ್ನ ಕರ್ತೃತ್ವಶಕ್ತಿಯ ಪರೀಕ್ಷಾ ಕಾಲ ಬಂದಿತು ಹರಪ್ರಸಾದನ ಮುಖ ಲಕ್ಷಣಗಳು ಸ್ಪಷ್ಟ ಆತನು ಪಂಜಾಬಿ, ಬಂಗಾಲಿ, ಮಹಾರಾಷ್ಟ್ರೀಯ, ಆಸ್ಸಾಮೀ ಅಥವಾ ಗುಜರಾಥೀ, ಮಾರವಾಡೀ ದೇಶದವ ನಲ್ಲ- ದಾಕ್ಷಿಣಾತ್ಯನಂತೂ ಅಲ್ಲವೇ ಅಲ್ಲವೆಂದು ಸಾರಿ ಹೇಳುತ್ತಿದ್ದವು. ನನ್ನ ಕಡೆಗೆ ಬಿಹಾರ ದೇಶದ ಒಬ್ಬ ಬಾಲಕನ ಪ್ರಕರಣ ವಿಚಾರಣೆಗಾಗಿ ಇತ್ತು. ಹರಪ್ರಸಾದನ ಸ್ವಭಾವದಲ್ಲಿ ಸಹಕಾರ ಭಾವನೆ ವ್ಯಕ್ತವಾಗಿತ್ತು. ಇದರ ಲಾಭ ನಾನು ತೆಗೆದುಕೊಳ್ಳುವದು ಪ್ರಾಸಂಗಿಕವೆಂದು ನಿರ್ಧರಿಸಿದೆನು. ಹರ ಪ್ರಸಾದನನ್ನು ಆ ಬಿಹಾರಿ ಬಾಲಕನನ್ನು ಕರೆಕಳುಹಿದೆನು. ಮೊದಲು ಆ ಬಿಹಾರಿ ಬಾಲಕನನ್ನು ಹತ್ತಿರ ಕರೆದು ಮೈದಡವಿ " ಏನು ಬಿಹಾರಿ ಬಾಬು! ಏನು ಸಮಾಚಾರ" ? ಎಂದು ವಿನೋದದಿಂದ ಮಾತನಾಡಿಸಿದೆನು. "ಬಿಹಾರಿ ಬಾಬು" ಬಹಳ ಚಿಕ್ಕ ಹುಡುಗ, ಆರು ವಯಸ್ಸಿರಬಹುದು. ನಿರಾಶ್ರಿತರ ಗುಂಪಿನವರು ಬಿಟ್ಟು ಹೋದ ತಬ್ಬಲಿ ಮಗು. ದಿಗ್ಭ್ರಾಂತ ಮಗು ಯಾವ "ವಾಡಿಕೆಯ ಪ್ರಶ್ನೆ"ಗೂ ಉತ್ತರ ಕೊಡುತ್ತಿದ್ದಿಲ್ಲ. ಆ ಮಗುವಿಗೆ ಬೇಕಾ ದುದು ಕೇವಲ ಪ್ರೇಮ. ಕೇವಲ ಆದರ, ಕೇವಲ ಉಪಚಾರ. ಹತ್ತು ನಿಮಿ ಷದಲ್ಲಿ ಆ ಮಗುವನ್ನು ನಿಮ್ಮ ತೊಡೆಯ ಮೇಲೆ ಹಾಕಿಕೊಂಡು ತಟ್ಟಿ ಮೈ ದಡವಿದರೆ ಗಾಢ ನಿದ್ರೆಯಲ್ಲಿ ಆ ಮಗು ತೇಲಿ ಬಿಡುತ್ತಿತ್ತು. ಆಗ ಆ ಮಗು ವಿನ ಮುಖದ ಮೇಲೆ ಆಡುವ ಸುಳಿಯುವ ಪರಮಾನಂದವನ್ನು ಎಂದಿಗೂ ಯಾವ ಮಾನವ ಹೃದಯವೂ ಮರೆಯುವಂತಿಲ್ಲ. ಈ ಮಗುವಿನೊಡನೆ ಹರ ಪ್ರಸಾದನ ಚಲ್ಲಾಟ ಅವರಿಬ್ಬರೇ ಇದ್ದಾಗ ನಡೆಯುತ್ತಿತ್ತೆಂಬುದನ್ನು ನಾವು ದೈನಂದಿನ ನಿರೀಕ್ಷಣೆಯಿಂದ (Observation) ಕಂಡುಕೊಂಡಿದ್ದೆವು.

ನಾನು ಕೇಳಿದ ವಿನೋದದ ಪ್ರಶ್ನೆಗೆ ಬಿಹಾರಿ ಬಾಬು ಉತ್ತರ ಕೊಡ ಲಿಲ್ಲ ಇಷ್ಟೇ ಅಲ್ಲ ನನ್ನ ಮೇಜಿನ ಮೇಲೆ ಇದ್ದ ಗಂಟೆ (Call-bell)ಯ ಕೂಡ ಆಟ ಪ್ರಾರಂಭಿಸಿದನು. ಗಂಟೆ ಬಾರಿಸಿದ ಕೂಡಲೇ ಸಹಾಯಕನು

ಬಂದಾಗ ಹರಪ್ರಸಾದ ಮತ್ತು ಬಿಹಾರಿ ಬಾಬು ಹಾಸ್ಯಮಾಡಿ ನಕ್ಕರು. ಸಹಾಯಕನು ಕಣ್ಣು ಕೆಂಪಗೆ ಮಾಡಿ ಮರಳಿ ಹೋದನು. ನಾನು ಮುಗುಳ್ನಗೆ ನಕ್ಕೆನು. ಆಗ ಕೆಲಮಟ್ಟಿಗೆ ಮೂವರಲ್ಲಿ ಆತ್ಮೀಯತೆ ಮೂಡಿತೆನ್ನಬಹುದು. ಆಗ ನನ್ನ ಮನಸ್ಸಿನಲ್ಲಿ "ಇಂಗ್ಲೀಷ" ಮಾಡಬೇಕೆಂದು ಹೊಳೆಯಿತು. ಇವನ ಮೇಲೆ ಅವನನ್ನು, ಅವನ ಮೇಲೆ ಇವನನ್ನು 'ಛೂ' ಬಿಟ್ಟು, ಇಬ್ಬರ ಇಂಗಿತವನ್ನೂ ತಿಳಿದುಕೊಳ್ಳಲು ನಿರ್ಧರಿಸಿದೆನು. ಅತ್ಯಂತ ನಿಸ್ಸಹಾಯಕನಾದಂತೆ ನಾನು ನಟಿಸಿ, ಹರಪ್ರಸಾದನಿಗೆ ಹಿಂದಿಯಲ್ಲಿ ಹೇಳಿದೆನು. "ನೋಡು ಹರಪ್ರಸಾದ ! ಈ ಬಿಹಾರಿ ಬಾಬು ನಮ್ಮಲ್ಲಿಗೆ ಬಂದು ಆರು ತಿಂಗಳಾಯಿತು. ಏನು ಮಾಡಿದರೂ ತನ್ನ ತಾಯಿ ತಂದೆ, ತನ್ನವರ ಊರು-ಕೇರಿ, ತನ್ನ 'ಹಿರಿ ಗುರಿ'ಯರು ಇವರ ಬಗ್ಗೆ ಒಂದು 'ಚ'ಕಾರ ಶಬ್ದ ಹೇಳಲೊಲ್ಲನು. ನಿನ್ನಿಂದ ಅವನು ತನ್ನ ತಾಯಿ ತಂದೆಯರನ್ನು ಸೇರಬೇಕು. ಇಲ್ಲದಿದ್ದರೆ ಹೀಗೇ ಅನಾಥನಾಗಿ ಹೋಗುತ್ತಾನೆ ಪಾಪ ! ತಾಯಿ ತಂದೆ ಅಣ್ಣ ತಮ್ಮ ಅಕ್ಕ ತಂಗಿ ಅಜ್ಜ ಅಮ್ಮ ಎಷ್ಟು ನೆನೆಸುತ್ತಾರೋ ಏನೋ !" ಎಂದು ಹೀಗೆಯೇ ಪ್ರಾರಂಭ ಮಾಡಿದೆನು. ನನ್ನ ಆಫೀಸಿನಲ್ಲಿ ಭಾರತ ನಕಾಶ ಮೂರು ಭಾಷೆಯಲ್ಲಿದ್ದವು. ಒಂದು ಹಿಂದೀ, ಇನ್ನೊಂದು ಇಂಗ್ಲೀಷ, ಮತ್ತೊಂದು ಕನ್ನಡ. ಹಿಂದೀ ನಕಾಶದಲ್ಲಿ ಬಿಹಾರ ರಾಜ್ಯದ ಕಡೆಗೆ ತೋರಿಸಿ ಬಹುಶಃ ಈ ಬಾಬು ಈ ದೇಶದ ಯಾವುದೇ ಒಂದು ಊರಿನವನಿರಬೇಕು ಎಂದು ಹರಪ್ರಸಾದನಿಗೆ ಹೇಳಿ, ನಾನು ಪುನಃ ನನ್ನ ನಿತ್ಯದ ಪತ್ರವ್ಯವಹಾರದ ಕಡೆಗೆ ಲಕ್ಷ್ಯ ಹೊರಳಿಸಿದೆನು. "ಹಾಂ ! ಹಾಂ !" ಎಂದಿಷ್ಟು ಮಾತ್ರ ಉತ್ತರ ಕೊಡುತ್ತಿದ್ದ ಹರಪ್ರಸಾದ ನಕಾಶಕ್ಕೆ ಅತಿ ಸಮೀಪ ಹೋಗಿ ನಿಂತಿದ್ದು ನನಗೆ ಭಾಸವಾಯಿತು. ಎಗಡು ನಿಮಿಷ ನಾನು ಬರೆಯುವದನ್ನು ವೇಗದಿಂದ ಪ್ರಾರಂಭಿಸಿದೆನು. ಹರಪ್ರಸಾದ ನಕಾಶದ ಮೇಲೆ ಕೈಯಿಟ್ಟು ಗಂಗಾನದಿಯ ಕೂಡ ಹಿಮಾಲಯದಿಂದ ಇಳಿಯುತ್ತ ಕಾಶಿಗೆ ಬಂದಿದ್ದನು ನಾನು ಅವನಿಗೆ ಎಳ್ಳಷ್ಟೂ ಗೊತ್ತಾಗದಂತೆ ಹೊರಳಿ ನೋಡಿದೆನು. ಕಾಶಿ-ಗಯಾಗಳ ನಡುವೆ ಅವನ ಬೆರಳುಗಳು ರೇಲ್ವೆ ಹಾದಿಯಲ್ಲಿ ಒಂದು ಜಂಕ್ಶನ್ (Jn.) ಕ್ಕೆ ಮುಟ್ಟಿದವು. ಅವನು ಹೊರಳುವಷ್ಟರಲ್ಲಿಯೇ ನಾನು ನನ್ನ ಕಾರ್ಯದಲ್ಲಿ ನಿರತನಾದೆನು. ಕಾರ್ಯ ಮುಗಿಸಿದಂತೆ ನಟಿಸಿ, "ಏನು ಹರಪ್ರಸಾದ, ಬಾಬುವಿನ

ಊರು ತಾಯಿ ತಂದೆಯರ ವಿಷಯ ತಿಳಿದುಕೊಂಡು ನನ್ನೊಡನೆ ಸಹಕರಿಸುವೆಯಾ?" ಎಂದು ಕೇಳಿದೆನು. ಆಗ ಅವನು, 'ಹಾಂ ! ಜಿ !. ಜೀ ! ಹಾಂ !' ಎಂದು ಬಿಹಾರಿ ಬಾಬುವನ್ನು ಕರೆದುಕೊಂಡು ತಾನು ಒಳಗೆ ಹೋಗಬಹುದೋ ಎಂದು ಕೇಳಿದನು. ಗಂಟೆ ಒತ್ತಿ ಹೋಗಬಹುದು ಎಂದೆನು ! ಸಹಾಯಕ ಒಂದು ಕರೆದುಕೊಂಡು ಹೋದನು. ಇಂಡಿಯನ್ ಬ್ರಾಡಶಾ (Indian Bradshaw) ತೆಗೆದುಕೊಂಡು ಬನಾರಸ ಗಯಾ ರೇಲ್ವೆ ಹಾದಿಯನ್ನು ಹುಡುಕಿದೆನು. ನಕಾಶದಲ್ಲಿ ಅನೆರಡು ಜಂಕ್ಶನ್ ನಡುವೆ ಇರುವದು ಡೆಹರಿ ಓನ್-ಸೋನ್ ಜಂಕ್ಶನ್ ಎಂಬುದು ಖಚಿತವಾಯಿತು. ನಮ್ಮ ವಿಚಾರಣೆ, ಹರಪ್ರಸಾದನ ಹಣೆಯ ಬರೆಹ ಇವುಗಳು ಬುದ್ಧದೇವನ ಈ ಗಯೆ, ಕಾಶಿ ವಿಶ್ವೇಶ್ವರನ ಈ ಬನಾರಸ, ಇವೆರಡರ ನಡುವೆ ಸೋನ್ ನದೀ ದಂಡೆಯ ಮೇಲಿರುವ ಈ ಡೆಹರಿ ಜಂಕ್ಶನ್‌ದ ಸುತ್ತು ಹೆಣೆದಿದೆ ಎಂಬುದನ್ನು ನಾನು ಖಚಿತ ಮಾಡಿಕೊಂಡೆನು.

ಆದರೆ ನನಗೆ ಮನವರಿಕೆಯಾದುದು ಹರಪ್ರಸಾದನಿಂದ ದೃಢೀಕೃತವಾಗಬೇಕಷ್ಟೆ. ಆಗ ಮಾತ್ರ ಅದಕ್ಕೆ ಪಾವಿತ್ರ್ಯದ ಅನುಮೋದನೆ (Sanctity and sanction) ದೊರೆಯುವದು. ಯಾವುದಾದರೂ ಕ್ಷೇತ್ರದಲ್ಲಿ 'ಕೊಂಕಣ ಸುತ್ತಿ ಮೈಲಾರಕ್ಕೆ ಹೋಗುವ' ಅವಶ್ಯಕತೆ ಇದ್ದರೆ ಅದು ಈ "ಮಕ್ಕಳ ಅಂತಃಶೋಧನೆ"ಯ ಕ್ಷೇತ್ರದಲ್ಲಿಯೇ ಅದರಬಳಕೆ ಹೆಚ್ಚು. ಎರಡು ದಿನಗಳ ನಿರೀಕ್ಷಣೆಗೆಂದು ಹರಪ್ರಸಾದನ ಪ್ರಕರಣವನ್ನು ಮುಂದೂಡಿದೆನು. ಎಲ್ಲ ಕಾರ್ಯಕರ್ತರಿಗೆ ಇನ್ನಷ್ಟು ಜಾಗ್ರತರಿರಲು ತಿಳಿಸಿದೆನು. ಶೋಧಕ ಪಡೆಯವರಂತೆಯೇ ವಾಸನೆಯ ಮೇಲೆಯೇ ಗುರುತಿಸುವ ಶೋಧಕ ಪಡೆಯ ಸಹಾಯಕರೂ ಚುರುಕು ಬುದ್ಧಿಯವರಿರುತ್ತಾರೆ. ಹದಿನೇಳನೆಯ ದಿನ ಸಹಾಯಕ ಬಸವಂತ ಹರಪ್ರಸಾದನ ಕಚ್ಚಾ ಬರೆಹದ ಪುಸ್ತಕವನ್ನು ತಂದು ಒಪ್ಪಿಸಿದನು. ಅದರಲ್ಲಿ ಅಲ್ಲಲ್ಲಿ 'ಹರಪ್ರಸಾದ—ಡೆಹರಿ ಓನ್-ಸೋನ್" ಎಂದು ಹಿಂದಿಯಲ್ಲಿ ಸ್ಪಷ್ಟವಾಗಿ ಬರೆದಿತ್ತು.

ಹರಪ್ರಸಾದನೊಂದಿಗೆ ನಮಗೆ ಇನ್ನಾದರೂ ಯಾವುದರ ದೆಸೆಯಿಂದ ಮುಂದೆ ಮಾತು ಬೇಕು. ಅವನ ಪಾಡಿಗೆ ಅವನನ್ನೂ ಬಿಹಾರಿ ಬಾಬುವನ್ನೂ

ಬಿಟ್ಟೆನು. ಪೋಲೀಸ ಗಾಯಿಡು ತೆರೆದಿಟ್ಟುಕೊಂಡು ಸಂಬಂಧಿಸಿದ ಅಧಿಕಾರಿಗಳಿಗೆ ಹರಪ್ರಸಾದನ ಮುಖಲಕ್ಷಣ, ಅವನ ಎತ್ತರ, ಅವನ ಮೈಕಟ್ಟು, ಎಲ್ಲವನ್ನೂ ವಿವರಿಸಿ ಬರೆದು, ಇದಕ್ಕಿಂತ ಹೆಚ್ಚು ಸಂಗತಿಗಳು ತಿಳಿದ ಕ್ಷಣ ಅವರಿಗೆ ಹರಪ್ರಸಾದನ ತಾಯ್ತಂದೆ ಊರು, ಮೊದಲಾದ ವಿವರಗಳು ದೊರೆತ ಕೂಡಲೇ ನಮ್ಮಲ್ಲಿಗೆ ತಿಳಿಸಬೇಕಾಗಿಯೂ ಪತ್ರದಲ್ಲಿ ಬಿನ್ನವಿಸಿದೆನು. ಅಂಚೆಗೆ ಕಳುಹಿಸಿ ನಿದಾನವಾಗಿ ಉಸಿರೆಳೆದನು. ನ್ಯಾಯಾಧಿಕಾರಿಗಳು ಆಗಲೇ ಸಾಕಷ್ಟು ಅವಧಿಯನ್ನು ಶೋಧನೆಗಾಗಿ ಕೊಟ್ಟಿದ್ದರು. ಹೆಚ್ಚು ಅವಧಿಯನ್ನು ಬೇಡುವ ಪರಿಸ್ಥಿತಿಯಲ್ಲಿ ಈ ಪ್ರಕರಣವು ಇರಲಿಲ್ಲ–ಸಾಮಾನ್ಯವಾಗಿ ನೋಡುವವರಿಗೆ. ಸೂಕ್ಷ್ಮ ನೋಡುವವರಿಗೆ, ಈ ಪ್ರಕರಣಕ್ಕೆ ಹೆಚ್ಚು ಅವಧಿ ಸಿಕ್ಕಷ್ಟು ಹೆಚ್ಚು ಸ್ವಚ್ಛ ಶುಭ ಪರಿಣಾಮವೆಂದು ಕಂಡು ಬಂದೇ ಬರುತ್ತಿತ್ತು.

ಬಿಹಾರಿಬಾಬು ಮತ್ತು ಹರಪ್ರಸಾದರ ಗೆಳೆತನ ಬೆಳೆಯುತ್ತ ಹೊರಟಿತು. ಆದರೆ ಬಾಬು ಮಾತ್ರ ಯಾವುದೇ ಮಾತುಗಳನ್ನು ಸ್ಪಷ್ಟವಾಗಿ ತನ್ನ ತಾಯ್ತಂದೆಗಳನ್ನು ಕುರಿತು ಹೇಳಲಿಲ್ಲ. ಹರಪ್ರಸಾದ ತನ್ನ ಪ್ರಯತ್ನದ ಈ ಫಲವನ್ನು ನನಗೆ ತಿಳಿಸಿ ತಾನು ವಿಫಲನಾದುದಕ್ಕೆ ಕ್ಷಮೆ ಕೇಳಿದನು. ಮನಸ್ಸಿಗೆ ಹಚ್ಚಿಕೊಳ್ಳಕೂಡದೆಂದು ಅವನಿಗೆ ತಿಳಿಸಿ ಕಳಿಸಿದೆನು. ಎಲ್ಲ ಹೊಣೆಗಾರಿಕೆಯಿಂದ ಮುಕ್ತನಾದವನಂತೆ ಹರಪ್ರಸಾದನು ಆಟ ಪಾಟದಲ್ಲಿ ಎಲ್ಲರೊಡನೆ ಒಂದಾದನು.

## (೨)

ಪಾವಿತ್ರ್ಯದ ಅನುಮೋದನೆ (Sanctity and Sanction) ಎಂಬ ವಿಚಾರವು ಯಾವಾಗಲೂ ಅಕಾರ್ಯಕ್ಕೆ ಪಾತ್ರರಾದ ಅಥವಾ ಅಕಾರ್ಯದಿಂದ ಚ್ಯುತರಾದ ಎಳೆಯರ ವಿಷಯವಾಗಿ ಮಹತ್ವದ ಪಾತ್ರವನ್ನು ಆಡುವದು.

ಹರಪ್ರಸಾದ ತಿಳಿವಳಿಕೆಯುಳ್ಳ ಎಳೆಯ ಬಾಲಕ. ಅವನು ತನ್ನ ಮನೆ ಮಾರು ಬಂಧು ಬಳಗವನ್ನು ಬಿಟ್ಟು ಅಗಲಿ ಬಹಳ ವರ್ಷಗಳಾಗಿರಲೇ ಬೇಕು. ತೀರ ಚಿಕ್ಕಬಾಲಕನಿದ್ದಾಗ ಆತನು ಮಮತೆ ಮತ್ತು ಅಂತಃಕರಣ ಗಳಿಗೆ ಎರವಾಗಿ ಈ ಯಾಂತ್ರಿಕ ಉದರಂಭರಣದಲ್ಲಿ ಎದೆಕಲ್ಲು ಮಾಡಿಕೊಂಡು ಮನಸ್ಸು ಹಾಕಿರಲೇಬೇಕು. ಇವೇ ಮೊದಲಾದ ನಿರ್ಣಯಗಳಿಗೆ ನಾವು ನಿರೀಕ್ಷಣೆಯಿಂದ ಬರುತ್ತಿದ್ದೆವು. ಆದರೆ ನಾವು ಅವಸರಿಸಿದರೆ "ಭಟ್ಟಿ" ಕೆಡುವ ಸಂಭವವೇ ಹೆಚ್ಚು. ನೇರವಲ್ಲದ ರೀತಿಯಲ್ಲಿ ನಾವು ಸಮಸ್ಯೆಯ ಪರಿಹಾರಕ್ಕೆ ಕೈ ಹಾಕಬೇಕಷ್ಟೆ.

ಬಿಹಾರಿ ಬಾಬುವಿನ ವಿಷಯದಲ್ಲಿ ಹರಪ್ರಸಾದನು ವಿಚಾರ ಮಾಡಹತ್ತಿದಂದಿನಿಂದ ಹರಪ್ರಸಾದನು ತನ್ನ ವಿಷಯದಲ್ಲಿಯೂ ವಿಚಾರ ಮಾಡಹತ್ತಿದನೆಂದು ನಾವು ಕೆಲವು ದಿನಗಳಲ್ಲಿಯೇ ಕಂಡುಕೊಂಡೆವು. ಕಾರ್ಯಾಲಯದ ಸಹಾಯಕರೊಡನೆ ಹರಪ್ರಸಾದನು ಮೆಲ್ಲಗೆ ಮಾತಿಗೆ ಬಂದನು. ಸಹಾಯಕರ ಹೆಸರು ದೆಸೆ, ಅವರ ಸಂಬಳ, ಕಾರ್ಯದ ಸಮಯ ಬಂಧು ಬಳಗ, ಹೆಂಡತಿ ಮಕ್ಕಳು, ಅವರ ಸಾಲ ಶೂಲ, ಅವರ ವಯಸ್ಸು ಗಳಿಕೆ, ಹೀಗೆ ಮೆಲ್ಲ ಮೆಲ್ಲನೆ ಅವರ ಹೃದಯ ಗೆಲ್ಲುವ ಅಭಿಲಾಷೆಯಿಂದ ಆತ್ಮೀಯತೆಯ ಸಾಧನೆಗೆ ಸಾಗಿದನು.

ಕೇಳುವದೇನಿದೆ ! ಹೇಳಿ ಕೇಳಿ ನಿರೀಕ್ಷಣಾ ವರ್ಗದ ಸಹಾಯಕರು. ತಮ್ಮ ದೀನ ದೈನಂದಿನಗಳನ್ನು ಹರಪ್ರಸಾದನ ಎದೆ ಕರಗುವಂತೆ ಹೇಳಿದರು. ಹರಪ್ರಸಾದನ ಅಂತಃಕರಣದ ಗರ್ಭ ಮಂದಿರವು ಇಷ್ಟು ದಿನ ಬೀಗಮುದ್ರೆ ಯಿಂದ ಭದ್ರವಾದುದು ಮೆಲ್ಲನೆ ಸಹಾಯಕರಿಗೆ ರಹಸ್ಯವಾಗಿ ವಶವಾಗಹತ್ತಿತು. ಒಂದೊಂದೇ ಘಟನೆಯನ್ನು ಸಹಾಯಕರಿಗೆ ಸಾದ್ಯಂತವಾಗಿ ತಿಳಿಸಹತ್ತಿದನು. ಅವನ ನೆನಹುಗಳು ಹೆಚ್ಚಾಗಿ ಅವನನ್ನು ಹಿಂಸೆಗೆ ಗುರಿಮಾಡಿದ ಘಟನೆಗಳಿಗೆ ಸಂಬಂಧಿಸಿದವುಗಳೇ. ಅವುಗಳಿಂದಲೇ ಅವನ ಕಥಾನಕದ ಪ್ರಾರಂಭ. ಅವನು ತನ್ನ ಕಥಾಪ್ರಾರಂಭವನ್ನು ಮುಂಬಯಿ ಅನಾಥಾಶ್ರಮದಿಂದ ಮಾಡಿದನು. ಮುಂಬಯಿ ಅನಾಥಾಶ್ರಮವು ಅನಾಥರ ಒಂದು "ದೊಡ್ಡಿ" ಎನ್ನಬಹುದು. ಮುಂಬಯಿ ಅನಾಥಾಶ್ರಮಗಳು ಎಲ್ಲವೂ ಹೀಗೆ ಎನ್ನುವದು

ಸಾಧ್ಯವಿಲ್ಲ. ಶ್ರದ್ಧಾನಂದ ಮೊದಲಾದ ಮಹಾತ್ಮರ ಆಶ್ರಮಗಳು ಅನಾಥರಿಗೆ ಆಶ್ರಯ ನೀಡುವ ವಿಧಾನವೇ ಬೇರೆ. ಆದರೆ "ಅಡ್ಡಕಸುಬು" ಮಾಡುವ ಆಶ್ರಮಗಳೂ ಕೆಲವು ಇವೆ. ಅಲ್ಲಿ ನಡೆಯುವ ಹಾವಳಿಯೇ ಬೇರೆ. ಈ ಆಶ್ರಮಗಳಿಗೆ ಅನಾಥರ ಅವಶ್ಯಕತೆಯೇ ಇಲ್ಲ. ಈ ಆಶ್ರಮದ ಸಂಚಾಲಕರ ಕಾರ್ಯ ವಿಧಾನವೇ ಬೇರೆ. ಇಂಥ ಆಶ್ರಮಗಳ ಹಸ್ತಕರು ದೇಶದ ಎಲ್ಲ ಭಾಗಗಳಲ್ಲೂ ತಮ್ಮ ಜಾಲವನ್ನು ಹರಡಿರುತ್ತಾರೆ. ಹಿಮಾಲಯದ ಯಾತ್ರಿಕರಲ್ಲಿ, ಕಾಶಿಯ ಪ್ರವಾಸಿಗಳಲ್ಲಿ, ದೆಹಲಿಯ ಮತಪ್ರದರ್ಶಕರಲ್ಲಿ, ಕಲಕತ್ತೆಯ ಜನದಟ್ಟಣೆಯಲ್ಲಿ, ಪುರಿಯ ಜಗನ್ನಾಥನ ಸಾನ್ನಿಧ್ಯದಲ್ಲಿ, ಮದ್ರಾಸದ ರತ್ನವ್ಯಾಪಾರಿಗಳಲ್ಲಿ, ಮುಂಬಯಿ ಫಿಲ್ಮತಾರಾಗಣವನ್ನು ಮುತ್ತುತ್ತಿರುವ ಜನಸಂದಣಿಯಲ್ಲಿ, ಪುಣೆಯ ನಿಲ್ದಾಣದಲ್ಲಿ ಹೀಗೆ ಒಂದೇ ಎರಡೇ! ಎಲ್ಲೆಡೆಯಲ್ಲಿಯೂ ಈ ಹಸ್ತಕರ ಕೈಚಳಕವು ಇದ್ದೇ ಇರುವದು. ಅವರ ಸಭ್ಯತನ, ಅವರ ಅಂತಃಕರಣದ ಮಾತುಗಳು, ಅವರ ಶ್ರೀಮಂತಿಕೆಯ ಆಢ್ಯ, ಅವರ ಬಲಾಢ್ಯ ವರ್ತನೆ, ಅಧಿಕಾರಿ ವಲಯದಲ್ಲಿ ಅವರ ಪ್ರಭಾವ-ಯುಕ್ತ ಸಹವಾಸ, ಇವೆಲ್ಲವೂ ಇನ್ನೊಬ್ಬರು ಬಣ್ಣಿಸಿದ ಮಾತ್ರಕ್ಕೆ ಅರ್ಥವಾಗುವದಿಲ್ಲ. ಅನುಭವಿಸಿಯೇ ತಿಳಿದುಕೊಳ್ಳಬೇಕು. ಹೀಗೆಂದು ಕಣ್ಣೀರಿನ ಕೋಡಿಯನ್ನೇ ಹರಿಸಿ ಹರಪ್ರಸಾದನು ನಮ್ಮ ಸಹಾಯಕರಿಗೆ ತಾನು ಆರು ವರ್ಷಗಳಿಂದ ಅನುಭವಿಸಿದ ಈ ದರ್ಶದಾರುಣದ ದಬ್ಬಾಳಿಕೆಯ ಒಂದೊಂದೇ ಘಟನೆಯನ್ನು ಅಂಶ ಅಂಶವಾಗಿ ನಿರೂಪಿಸಿದನು. ಅಧಿಕಾರಿಯಾದ ನಾನು ಸಹಾಯಕರಿಂದ ತಿಳಿದು ಅವನ ಪತ್ರಿಕೆಯಲ್ಲಿ ಕ್ರಮಬದ್ಧವಾಗಿ ಬರೆಯುತ್ತ ಹೋದೆನು. ಸ್ಥಿತಿವಂತ ಮನೆತನದ ಮಕ್ಕಳನ್ನೇ ಹೆಚ್ಚಾಗಿ ಈ "ಅಡ್ಡ ಸೋಗಿನ" ಸಮಾಜ ಹಿತಚಿಂತಕರು ಹುಡುಕುವ ಹಿರಿಯ ಪರಿಪಾಠವನ್ನಿಟ್ಟುಕೊಂಡಿರುವರು. ಇವರು ತಮ್ಮ ಕೃಪಾದೃಷ್ಟಿಯನ್ನು ಈ ವರ್ಗದ ಎಳೆಯ ಮಕ್ಕಳ ಮೇಲೆ ತಮ್ಮ ವಿಶಿಷ್ಟವಾದ ಮನಮೋಹಕವಾದ ರೀತಿಯಲ್ಲಿ ಚಲ್ಲುವರು. ಹರಪ್ರಸಾದ ತನ್ನ "ಸ್ವಂತ ಘಟನೆ" ಹೇಳುವ ಮೊದಲು ತಾನು ಈ ಮಹಾನುಭಾವರ ಸಹವಾಸದಲ್ಲಿ "ಕಣ್ಣಾರೆ ಕಂಡ" ಅನ್ಯ ಘಟನೆಗಳ ದಾರುಣ ಚಿತ್ರವನ್ನು ಬಣ್ಣಿಸುತ್ತ ಹೋಗುವದರಲ್ಲಿ ಒಂದು ಸ್ವಾರ್ಥವನ್ನು ಅಡಗಿಸಿಟ್ಟುಕೊಂಡವನಂತೆ ಕಾಣುತ್ತಿದ್ದನು. ಸ್ವಾರ್ಥವಲ್ಲ.

ಅದು ಕೇವಲ 'ಸಂರಕ್ಷಣೆ' (Defence) ಎಂಬುದು ಸುರಿತ ಕಣ್ಣುಗಳಿ ನಿಚ್ಚಳ ಕಾಣುತ್ತಿತ್ತು. ತಾನು ತಪ್ಪಿತಸ್ಥನಲ್ಲ. ಅರಿಯದೇ ಈ ಮಹಾ ಬಲೆಗಾರರ ಜಾಲಬಂಧನದಲ್ಲಿ (Net-work) ಸಿಕ್ಕು ಒದ್ದಾಡುತ್ತಿದ್ದ ಚಿಕ್ಕ ಪ್ರಾಣಿ. ಇದೀಗ ತನ್ನನ್ನು ನಾವು ನೋಡುವ ದೃಷ್ಟಿಯಲ್ಲಿ ಸಹಾನುಭೂತಿಯ ಅವಶ್ಯಕತೆ ಬಹಳವೆಂಬುದನ್ನು ಮನಗಾಣಿಸುವ ಉದ್ದೇಶದಿಂದಲೇ ಹರಪ್ರಸಾದನು "ಕೊಂಕಣ ಸುತ್ತಿ ಮೈಲಾರಕ್ಕೆ" ಬರುತ್ತಿದ್ದನು. ಪರಿಪಾಠ ಈ ಕ್ಷೇತ್ರಕ್ಕೇ ಮೀಸಲು ತಾನೆ ! ನಾವಾದರೂ ನೇರವಾಗಿ ಅವನ ಆತ್ಮಕಥನವನ್ನೆಲ್ಲಿ ಬಯಸುತ್ತಿದ್ದೇವೆ ! ಯಾವದೊಂದು ವಿಷಯ ಮಾಗಿ ಪಕ್ವವಾಗಲು ಸ್ವಾಭಾವಿಕ ಸಮಯವನ್ನು ತೆಗೆದುಕೊಳ್ಳುವದು ನಿಸರ್ಗದ ನಿಯಮ. ಹರಪ್ರಸಾದನ ಕಣ್ಣಿನಲ್ಲಿ ನಾವೂ ಆತನಂತೆ ಮನುಷ್ಯ ಮಾತ್ರರು ಎಂಬುದನ್ನು ಬಿಂಬಿಸಲು ಹವಣಿಸುತ್ತಿರುವ ನಮಗೆ ಇಂಥ ಸಮಯ ಬಹಳ ಅನುಕೂಲ. ಸಹಾಯಕರು ತಮ್ಮದನ್ನು ತೋಡಿಕೊಂಡರು. ಶೀಘ್ರ ಪರಿಣಾಮ.

ಹರಪ್ರಸಾದನು ಒಂದು ಮುಂಜಾನೆ ನನ್ನ ಕೊಠಡಿಗೆ ಬಂದು ಮೇಜಿನ ಮೇಲೆ ತನ್ನ ಉಗುರುಗಳಿಂದ ಏನು ಏನೋ ಗೆರೆಗಳನ್ನು ಗೀಚುತ್ತ ನಿಂತನು. ಸ್ವಲ್ಪ ಹೊತ್ತು ನಾನು ನನ್ನ ದಿನದ ಕಾರ್ಯದಲ್ಲಿ ಮನಸ್ಸು ಹಾಕಿ ಬರೆಯುವ ದನ್ನೆಲ್ಲ ಮುಗಿಸಿದೆನು- ಕಾಗದ-ಪತ್ರಗಳನ್ನು ತೆಗೆದಿಡಲು ನನ್ನ ಸಹಾಯಕ ರನ್ನು ಕರೆಯಲು ಕರೆಯು ಗಂಟೆ (Call-bell) ಗೆ ಕೈಹಾಕಿದೆನು. ಹರಪ್ರಸಾದನು ನಡುವೆ ಕೈ ಹಾಕಿ ಅದನ್ನು ತನ್ನ ಕೈಯಲ್ಲಿ ಹಿಡಿದುಕೊಂಡು ನಿಂತನು. ನನಗೆ ತಡೆಯುವದಾಗಲಿಲ್ಲ. ನನ್ನ ಕಣ್ಣುಗಳನ್ನು ಮೇಲೆತ್ತಿ ಹರಪ್ರಸಾದನನ್ನು ಪ್ರಶ್ನಾರ್ಥಕವಾಗಿ ನೋಡಿದೆನು. ಮೇಜಿನ ಮೇಲೆ ಗಂಟೆಯನ್ನಿಟ್ಟು ನನ್ನ ಕಾಗದ ಪತ್ರಗಳನ್ನೆತ್ತಿಕೊಂಡು ಕಪಾಟಿನಲ್ಲಿಡುತ್ತ ಸ್ವಲ್ಪ ಬೇಸರದಿಂದ, ಹಿಂದಿಯಲ್ಲಿ ನುಡಿದನು: "ತಾವು ಇಷ್ಟೆಲ್ಲ ಮಕ್ಕಳ ವಿಷಯವಾಗಿ ಅವರೊಡನೆ ಮಾತು ಕತೆ ನಡೆಯಿಸಿ, ಅವರವರ ಸಂಬಂಧಿಕರಿಗೆ ಬರೆದು ತಿಳಿದು ವ್ಯವಹಾರ ಮಾಡುತ್ತೀರಿ: ಹರಪ್ರಸಾದನೆಂಬ ಒಬ್ಬ ಅನಾಥ ಬಾಲಕ ಈ ರಿಮಾಂಡ ಹೋಮಿನಲ್ಲಿ, ಅದೇಕೆ ಈ ಜಗತ್ತಿನಲ್ಲಿ ಜೀವಂತವಿರುವ ನೆಂಬುದನ್ನು ತಿಳಿದುಕೊಳ್ಳಲು ಸಮಯ ಸಾಲದೇ ? ನನಗೂ ತಮ್ಮೆದುರಿಗೆ

ಸಾವಿರ ಮಾತು ಹೇಳುವದಿದೆ! ನಾನೇನು ನಮ್ಮ ಕರುಳುಬಳ್ಳಿಯನ್ನು ಕತ್ತರಿಸಿ ಒಗೆದು ಮನೆ ಬಿಟ್ಟು ಬಂದವನಲ್ಲ. ನನಗೂ ನನ್ನವರು ತನ್ನವರು ಇದ್ದಾರೆ! ನಾನೇನೂ ಸಾಧುಮಹಾರಾಜನಲ್ಲ. ಎಲ್ಲವನ್ನೂ ಮರೆತುಬಿಟ್ಟು ಗವಿಯ ಮೂಲೆಯಲ್ಲಿ ಇರಲಿಕ್ಕೆ. ಬೈರಾಗಿಯಲ್ಲ. ದೇಶ ದೇಶಾಂತರಗಳಲ್ಲಿ ಅಲೆಯಲಿಕ್ಕೆ. ನಾನು ಬಹಳ ದುಃಖಿತನಿದ್ದೇನೆ. ನನ್ನ ಪರೀಕ್ಷೆ ಬಹಳ ಮಾಡಬೇಡಿರಿ. ತುಸು ಆದರೂ ನನ್ನ ದೆಸೆಯಿಂದ ಕಣ್ಣು ತೆರೆಯಿರಿ. ನಾನು ನಿಮಗೆ ಹೇಗೆ ಪ್ರಾರ್ಥಿಸಿಕೊಳ್ಳಬೇಕು ನನಗೆ ಗೊತ್ತಿಲ್ಲ. ನಾನಿನ್ನೂ ಬಹಳ ಚಿಕ್ಕವನು. ತಾವು ನನಗೆ ಹಿರಿಯ ಅಣ್ಣಂದಿರಂತೆ ಇದ್ದೀರಿ. ಆ ದಿನ ನಿಲ್ದಾಣದಲ್ಲಿ ನನಗೆ ನೀವು 'ಚಿಕ್ಕ ತಮ್ಮ'ನೆಂದು ಕರೆದಿದ್ದೀರಿ. ಏನಾದರೂ ನನ್ನ ಸಂಬಂಧ ವಿಚಾರ ಮಾಡುತ್ತೀರಲ್ಲವೇ ?" ತುಂಬಿದ ಕಣ್ಣು, ಗದ್ಗದ ಕಂಠ, ಕಂಪಿತ ದೇಹ, ನನ್ನನ್ನು ಹರಪ್ರಸಾದನ ಪರವಾಗಿ ಎದುರಿಸಿದವು.

ನನ್ನ ಅಧಿಕಾರಿಯ ಬಿಗುವನ್ನು ಗಂಟು ಕಟ್ಟಿ ಬದಿಗಿರಿಸಿ, ನಾನು ಎದ್ದು ನಿಂತು ಹರಪ್ರಸಾದನ ಬೆನ್ನು ತಲೆ ಇವನ್ನು ನೇವರಿಸಿ, ಆತನಿಗೆ ಧೈರ್ಯದ ವಿಶ್ವಾಸದ ನಾಲ್ಕು ಮಾತುಗಳನ್ನು ಹೇಳಿದೆನು: "ನಾನೂ ಸಹ ನಿನ್ನಂತೆಯೇ ಒಬ್ಬ ಮನುಷ್ಯ. ನಿನ್ನ ವಿಷಯದಲ್ಲಿ ಎಲ್ಲವೂ ನನಗೆ ತಿಳಿದಿರುವದಿಲ್ಲ. ನಾನೂ ನೀನೂ ಕೂಡಿಯೇ ನಿನ್ನ ವಿಷಯದಲ್ಲಿ ವಿಚಾರ ಮಾಡಿದರೆ ಮಾತ್ರ ಕರ್ತವ್ಯ ಮಾಡಿದಂತಾಗುವದು. ನೀನು ಹೆದರುವದಾದರೂ ಏಕೆ? ದೇವರಲ್ಲಿ ವಿಶ್ವಾಸವಿಟ್ಟು ಇಬ್ಬರೂ ಪ್ರಯತ್ನ ಮಾಡಿದರಾಯಿತು. ನಿನಗೆ ನಿನ್ನ ವಿಷಯದಲ್ಲಿ ಎಲ್ಲವೂ ನೆನಪಿನಲ್ಲಿಲ್ಲ. ಚಿಕ್ಕವನಿದ್ದಾಗ ನೀನು ಊರು ಬಿಟ್ಟಂತೆ ಕಾಣುತ್ತದೆ. ಇದರಿಂದಲೇ ನಾವು ಬಹಳ ತೊಂದರೆಗೆ ಬಿದ್ದಿದ್ದೇವೆ. ಈಗ ನೀನು ನಿನ್ನ ನೆನಪಿನ ಶಕ್ತಿಗೆ ನಿನ್ನ ಕರುಳಿನ ಬಳ್ಳಿಯ ಸವಿರಸದ ಧಾರೆಯೆರೆದರೆ ಮಾತ್ರ ನೀನು ನಿನ್ನ ಎಲ್ಲ ಕಥೆಯನ್ನು ನಮಗೆ ಉಪಯೋಗ ಬೀಳುವಂತೆ ಹೇಳುವಿ. ನಾನು ನಿನ್ನ ಅಣ್ಣ. ನಾನು ನಿನಗಾಗಿ ಭೂಮಿ ಆಕಾಶ ಏಕ ಮಾಡಿ ದುಡಿಯುತ್ತೇನೆ. ಹಳಹಳಿಯಿಲ್ಲದೆ ಇರು. ಶಾಂತವಾಗಿ ನಾಳೆ ಮುಂಜಾನೆ ಇಲ್ಲಿಗೆ ಬಾ. ಇಬ್ಬರೂ ಕೂಡಿ ಒಂದು ನಿರ್ಣಯಕ್ಕೆ ಬಂದರಾಯಿತು. ಹಿಂದುಸ್ತಾನದ ಯಾವ ಮೂಲೆಗೂ ಈಗ

ಪತ್ರಗಳು ನಾಲ್ಕು ದಿನಗಳಲ್ಲಿ ಮುಟ್ಟುತ್ತವೆ. ಯಾವ ಮೂಲೆಯಿಂದಲೂ ಉತ್ತರ ನಾಲ್ಕು ದಿನಗಳಲ್ಲಿ ಬರುತ್ತದೆ. ಎಂಟು ದಿನದ ಮಾತು. ಇನ್ನು ನೀನೇನೂ ನಿಮ್ಮ ಅನಾಥಾಶ್ರಮದ ವ್ಯವಸ್ಥಾಪಕನ 'ಕಣ್ಬಂದಿ'ಯಾಗಿಲ್ಲ ತಾನೇ !'' ಎಂದು ಹಾಸ್ಯ ಮಾಡಿದೆನು. ಮುಗುಳುನಗೆ ಹರಪ್ರಸಾದನ ಮುಖದ ಮೇಲೆ ಸೂಸಿತು. ನಮಸ್ಕಾರ ಮಾಡಿ ತನ್ನ ಸಹಪಾಠಿಗಳ ಕಡೆಗೆ ಹೋದನು.

ನನಗೆ ಮಾತ್ರ ಎದೆ ಬಡಿದುಕೊಳ್ಳಹತ್ತಿತು. ಈ ಹುಡುಗನಿಗಡಲೆ ನಾನು ಬಹಳ ಭರವಸೆಯ ಮಾತು ಕೊಟ್ಟಿದ್ದೇನೆ. ಹುಡುಗನು ನನ್ನನ್ನು ತನ್ನ ಅಣ್ಣನೆಂದುಕೊಂಡೇ ಭಾವಿಸಿ ಬಾಲ್ಯದ ಆಟ ಪಾಟಗಳಲ್ಲಿ ಒಂದಾಗುತ್ತಿದ್ದಾನೆ. ನಾನು ಈ ಕಾರ್ಯದಲ್ಲಿ ವಿಫಲನಾದರೆ ! ನನ್ನ ಯಶಾಪಯಶದ ಪ್ರಶ್ನೆ ನನಗೆ ಅಷ್ಟು ಮಹತ್ವದ್ದೆನಿಸಿಲ್ಲ. ಹುಡುಗನ ಕೋಮಲ ಹೃದಯದ ಮೇಲೆ ಎಂಥ ಆಘಾತವಾದೀತು. ಸಮಾಜದ ರೀತಿ ನೀತಿ ಮಾನವೀ ವಿಶ್ವಾಸ ಇವುಗಳ ಕಡೆಗೆ ಇದೀಗ ಮರಳಿ ಬರುತ್ತಿರುವ (Re-call) ಹುಡುಗನು ಪುನಃ ಒಂದು ಬಾರೆ ಮನಸ್ಸು ಕಲ್ಲುಮಾಡಿಕೊಳ್ಳುವ ಪ್ರಸಂಗ ಬಂದರೆಂತು ಎಂದು ನಾನು ಬಹಳ ತಳಮಳಗೊಂಡೆನು. ಹತ್ತು ನಿಮಿಷ ಸುಮ್ಮನೆ ಕಿಡಿಕಿಯಲ್ಲಿ ಕಣ್ಣಿಟ್ಟು ದಿಗದಂತದಾಚೆ ನೋಡುತ್ತ ನಿಂತೆನು. ತಟ್ಟನೆ ಕೃತಕೃತ್ಯನಾದ ನನ್ನನ್ನು ಯಾವದೋ ಅವ್ಯಕ್ತ ಶಕ್ತಿ ತಟ್ಟಿ ಎಚ್ಚರಿಸಿದಂತಾಯಿತು ನೈಜ ಜಗತ್ತಿಗೆ ಬಂದಾಗ ವಸ್ತುತಃ ನಾನು ಈ ತನಕ ಹರಪ್ರಸಾದನ ವಿಷಯವಾಗಿ ಕೈಕೊಂಡ ಕ್ರಮಗಳನ್ನು, ಅವನ ಪ್ರಕರಣವನ್ನು ನೆನಪಿಗೆ ತಂದುಕೊಂಡು, ಮೆಲುಕು ಹಾಕಿದೆನು. ನಾನು ಮಾಡದೇ ಉಳಿದಿರುವದು ಏನೂ ಇಲ್ಲವೆಂದು ನನ್ನ ಅಧಿಕಾರೀ ಅನುಭವ ಸಾರಿ ಹೇಳಿತು. ಶಾಂತನಾಗಿ ನನ್ನ ಕುರ್ಚಿಯಲ್ಲಿ ಒರಗಿದೆನು. ಹರಪ್ರಸಾದನು ಮಾತ್ರ ನನ್ನ ಸ್ಮೃತಿಪಟಲದ ಮೇಲೆ ಹಸನ್ಮುಖನಾಗಿ ಲೀಲಾಜಾಲವಾಗಿ ಲಾಸ್ಯವಾಡಹತ್ತಿದನು.

ನನ್ನ ಸಹಾಯಕ ಬಂದು ಎಬ್ಬಿಸಿದಾಗ ನನ್ನನ್ನು ಈ ಜಗತ್ತಿಗೆ ಜಗ್ಗಿ ಹಿಡಿದು ತಂದಂತಾಯಿತು. ಸಹಾಯಕನು ನನ್ನ ಬೈಸಿಕಲ್ಲು ಹೊರಗೆ

ತಂದಿಟ್ಟಿರುವವನೆಂದು ಹೇಳಿದನು. ಆಗಲೇ ಅಪರಾಹ್ನದ ಒಂದು ಗಂಟೆ ಯಾಗಿತ್ತು. ನನ್ನ ಮುಖದ ಮೇಲೆ ಯಾವದೇ ಸ್ಪಷ್ಟ ಚಿಹ್ನೆಗಳನ್ನು ಕಾಣದ ಸಹಾಯಕ ನಡೆದುದನ್ನು ತಿಳಿದುಕೊಳ್ಳುವ ಅಭಿಲಾಷೆಯನ್ನು ವ್ಯಕ್ತ ಪಡಿಸುವಂತಿತ್ತು. ಆತನಿಗೆ ಒಂದೇ ಒಂದು ಮಾತು ಹೇಳಿದೆನು: "ರೈಲುಗಾಡಿ ಈಗ ತನ್ನ ಹಾದಿಯ ಮೇಲೆ ಬಂದಂತಾಗಿದೆ ನೋಡಬೇಕು."

ಸಹಾಯಕನು ಮಾತ್ರ ನನಗಿಂತ ಆವೇಶದಲ್ಲಿ ಎರಡು ಮಾತು ಹೆಚ್ಚು ಹೇಳಿದನು. "ಗಾಡಿ ಸಿಳ್ಳು ಹಾಕಿದೆ. ಗಾರ್ಡ ನಿಶಾನೆ ತೋರಿಸುವದಷ್ಟೆ ಉಳಿದಿದೆ."

"ಸ್ಟೇಶನ್ ಮಾಸ್ತರು ಲಾಯಿನ್ ಕ್ಲಿಯರ್ (Line clear) ಕೊಡಬೇಕು. ಎರಡನೆಯ ಗಂಟೆ ಬಾರಿಸಬೇಕು. ಆಗ ಗಾರ್ಡ ನಿಶಾನೆ ಎತ್ತುವದು ಎಷ್ಟು ಹೊತ್ತು ಬಸವಂತ" ಎಂದು ನಾನು ಸೈಕಲ್ ಹತ್ತಿದೆನು. "ಪೋರ್ಟರನನ್ನು ಮರೆತೇ ಬಿಟ್ಟಿರಿ. ಅದಕ್ಕೇ ಇಷ್ಟು ತಡ ಆಗಿದೆರಿ. ನಾನು ಹೋಗಿ ಕ್ಯಾಬಿನ್ ಏರಿ ಸಿಗ್ನಲ್ ಕೊಡಬೇಕಲ್ಲವೇನ್ರಿ ?" ಎನ್ನುತ್ತಿದ್ದ ಬಸವಂತ. ನಾನು ಆಗಲೇ ಮೂರು ಸಾರೆ ಪೆಡೆಲ್ ತುಳಿದು ಗಾಳಿ ಸಹವಾಸ ಮಾಡಿಕೊಂಡಿದ್ದೆನು. ನನ್ನ ಹಸಿವು ನನಗೆ ಸಿಗ್ನಲ್ ಕೊಟ್ಟಿತ್ತು.

(೩)

ಮರುದಿನ ಮುಂಜಾನೆ ಹರಪ್ರಸಾದನು ಸಹಾಯಕ ಬಸವಂತನೊಂದಿಗೆ ನನ್ನ ಕೊಠಡಿಗೆ ಬಂದು ಮೃದುವಾದ ಪಸನ್ನುಖದಿಂದ ನಮಸ್ಕರಿಸಿ ನಿಂತನು. ಸಹಾಯಕನಿಗೆ ಹೇಳಿ ಹರಪ್ರಸಾದನಿಗೆ ಒಂದು ಕುರ್ಚಿಯನ್ನು ನನ್ನ ಬದಿಗೆ ಹಾಕಿಸಿದೆನು. ಬಸವಂತನೂ ತನಗೊಂದು ಚಿಕ್ಕ ಬಾಕನ್ನು ತಂದುಕೊಂಡು ಕುಳಿತುಕೊಳ್ಳುವಂತೆ ತಿಳಿಸಿದೆನು. ಬಸವಂತನು ಮಧ್ಯಸ್ಥನಾಗಿ ಮಾತು ಪ್ರಾರಂಭಿಸಿದನು. ಹರಪ್ರಸಾದನು ಚಾಚೂ ಮರೆಯದೆ ಸವಿಸ್ತಾರವಾಗಿ

ತಾನು ತನ್ನ ಊರು ಬಿಟ್ಟಂದಿನಿಂದ ಇಲ್ಲಿಯ ತನಕ ಅನುಭವಿಸಿದ ಪ್ರಸಂಗಗಳನ್ನು ನನ್ನೆದುರು ಹೇಳುವದೆಂದು ಅವರೀರ್ವರೂ ಗೊತ್ತುಮಾಡಿ ಕೊಂಡು ಬಂದಿದ್ದರು. ಆದರಂತೆ ಬಸವಂತನು ನನಗೆ ತಿಳಿಸಬಹುದ್ದೋ ಹೇಗೆಂಬುದನ್ನು ವಿಚಾರಿಸಿದನು. ಅಧಿಕಾರಿಯಾಗಿ ನಾನು ಈ ಉಪಕ್ರಮಕ್ಕೆ ಆಸ್ಪದ ಕೊಡುವದು ಕೇವಲ ಸಮಯದ ಉಳಿತಾಯವೇ ಹೊರತು ಬುದ್ಧಿ ವಂತಿಕೆಯಲ್ಲವೆಂದು ನಿರ್ಧರಿಸಿದೆನು. ಆದರೆ ಅವರಿಬ್ಬರ ಉತ್ಸಾಹದ ಮೇಲೆ ತಣ್ಣೀರನ್ನೆರಚುವದೇಕೆ ? ಎಂದು ಬೇರೊಂದು ಉಪಾಯ ಹೂಡಿದೆನು. ಹರಪ್ರಸಾದನು ತನಗೆ ಏನು ಹೇಳಬೇಕೆಂದೆನಿಸಿದೆಯೋ ಅದೆಲ್ಲವನ್ನು ನನಗೆ ತಿಳಿಸಬೇಕು. ಬಸವಂತನು ಇದನ್ನೆಲ್ಲ ಕೇಳುತ್ತ ಅಲ್ಲಲ್ಲಿ ತನ್ನ ಅಭಿಪ್ರಾಯ ವನ್ನು ಹೇಳುತ್ತಿರಬೇಕು. ಅಂದರೆ ಮಾತ್ರ ಅಧಿಕಾರಿಯಾದ ನನಗೆ ಯಾವು ದೊಂದು ನಿರ್ಣಯಕ್ಕೆ ಬರಲು ಅನುಕೂಲವಾಗುವದೆಂದು ತಿಳಿಸಿದೆನು. ಹರಪ್ರಸಾದನು ಪ್ರಾರಂಭಮಾಡಲು ಅವಕಾಶ ತೆಗೆದುಕೊಳ್ಳಹತ್ತಿದನು. ಬಸವಂತನೇ ಮೊದಲು ಮಾತುಗಳನ್ನು ಪ್ರಾರಂಭಿಸಿದನು.

"ಹರಪ್ರಸಾದ ! ನೀನು ಡೆಹರಿ-ಓನ್-ಸೋನ್‌ದಲ್ಲಿ ನಿನ್ನ ತಂದೆ ಯೊಂದಿಗೆ ಅಂದು ರೇಲ್ವೆ ನಿಲ್ದಾಣಕ್ಕೆ ಬಂದಿದ್ದೆಯಲ್ಲವೇ ? ನಿನ್ನ ತಂದೆ ನಿಲ್ದಾಣದಲ್ಲಿ ತನ್ನ ಸಕ್ಕರಿ ಗಿರಣಿಯ ಯಂತ್ರದ ಸಾಮಾನುಗಳನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಲು ಬಂದಿದ್ದನಷ್ಟೇ. ನೀನು ಒಂದು ಕಟ್ಟೆಯ ಮೇಲೆ ನಿನ್ನ ತಂದೆ ಕೊಡಿಸಿದ ಪೆಪ್ಪರಮಿಂಟು ತಿನ್ನುತ್ತ ಕುಳಿತಿದ್ದೆಯಲ್ಲವೆ ! ಆಗ........" ಎಂದು ಇನ್ನೂ ಮುಂದೆ ಹೇಳಬೇಕೆನ್ನುವಷ್ಟರಲ್ಲಿ ಹರಪ್ರಸಾದನು ನಡುವೆ ಬಾಯಿ ಹಾಕಿ "ಆಗ........ಒಂದು ಗಾಡಿ ಬಂದು ನಿಂತಿತು. ಜನರು ಇಳಿಯುವದು ಹತ್ತುವದು ನಡೆಯಿತು. ಈ ನುಗ್ಗಾಟದಲ್ಲಿ ನನಗೆ ತಂದೆ ಎಲ್ಲಿಯೂ ಕಾಣದಂತಾದನು. ತುಸು ಬೆದರಿ 'ಬಾಪೂಜಿ ! ಬಾಪೂಜಿ !' ಎಂದು ಕೂಗಿದೆನು. ಆಗಿನ್ನೂ ನನಗೆ ಚಿಕ್ಕ ವಯಸ್ಸು".

"ಈಗ ಮಾತ್ರ ಬಹಳ ಹಿರಿಯ ಹರಪ್ರಸಾದ" ಎಂದು ಬಸವಂತನು ಹುಡುಗಾಟ ಮಾಡಿದನು. ಈ ಹುಡುಗಾಟದಿಂದ ಹರಪ್ರಸಾದನ ಮುಖಮುದ್ರೆ ಯಲ್ಲಿ ಎಳ್ಳಷ್ಟೂ ವ್ಯತ್ಯಾಸವಾಗಲಿಲ್ಲ. ಹರಪ್ರಸಾದನ ಮುಖದ ಮೇಲೆ

ಹಿಂದಿನ ನೆನಪಿನ ಕರಿಯ ಮೋಡವೊಂದು ಸುಳಿದಾಡುತ್ತಿತ್ತು. ಮಾತು ಮುಂದುವರೆಸಿದನು: "ನನ್ನ ಕಣ್ಣು ನೀರು ತುಂಬಿದವು. ನನ್ನನ್ನು ಎತ್ತಿಕೊಂಡು ತನ್ನ ಹೆಗಲಿನ ಮೇಲೆ ಹಾಕಿಕೊಂಡವನು ನನ್ನ ತಂದೆಯೆಂದೇ ನನ್ನ ಭಾವನೆ. ಬಿಕ್ಕಿ ಬಿಕ್ಕಿ ಅಳುತ್ತಿದ್ದವನನ್ನು ಬೆನ್ನಿನ ಮೇಲೆ ತಟ್ಟಿ ಸುಮ್ಮನಿರಿಸಿದವನು ನನ್ನ ತಂದೆಯೆಂದೇ ನನ್ನ ಭಾವನೆ. ಆಗೊಮ್ಮೆ ಈಗೊಮ್ಮೆ ಬಿಕ್ಕುತ್ತ ಕೊನೆಗೊಮ್ಮೆ ಶಾಂತನಾಗಿ ನನ್ನ ತಂದೆಯ ಹೆಗಲ ಮೇಲೆಯೇ ನಾನು ಮಲಗಿಕೊಂಡೆನು. ಅಷ್ಟು ಸಣ್ಣವನು ನಾನು, ಅಷ್ಟು ಅರಿಯದವನು ನಾನು ನನ್ನ ತಂದೆ ನಾನು ನಿಲ್ದಾಣಕ್ಕೆ ಅಂದು ಬಂದದ್ದು ಸಾಯಂಕಾಲ ಐದು ಗಂಟೆಯಷ್ಟು ಹೊತ್ತಿಗೆ. ನಾನು ಪುನಃ ಎಚ್ಚತ್ತು ಕಣ್ಣರಳಿಸಿ ನೋಡಿದಾಗ ಕಿಡಿಕಿಯಲ್ಲಿ ಸೂರ್ಯನ ಹೊಂಬಿಸಿಲು ತೂರಿಬರುತ್ತಿತ್ತು. ನಾನು ನೋಡಿದ್ದು ಮನೆಯ ಕಿಡಿಕಿಯಲ್ಲ, ಗಾಡಿಯೊಳಗಿನ ಕಿಡಿಕಿ. ನಾನು ಮಲಗಿದುದು ನನ್ನ ತಂದೆಯ ತೊಡೆಯ ಮೇಲಲ್ಲ. ಯಾವುದೋ ಒಬ್ಬ ಸಾಧುಮಹಾರಾಜನ ಕಾವಿಯ ತೊಡೆಯ ಮೇಲೆ. ನಾನು ತಟ್ಟನೆ ಜಿಗಿದು ಕೆಳಗಿಳಿದೆನು. ಗಡಗಡನೆ ನನ್ನ ಎಳೆಯ ಶರೀರವೆಲ್ಲ ನಡುಗಿತು. ಇದ್ದ ಹತ್ತು ಹನ್ನೆರಡು ಹಲ್ಲುಗಳೂ ಎಲ್ಲಿ ಉದುರಿ ಬೀಳುವವೋ ಎಂದು ಬಾಯಿ ಬಿಗಿ ಹಿಡಿದು ಸುತ್ತು ನೋಡಿದೆನು. ಇಡೀ ಗಾಡಿಯಲ್ಲಿ ಎಚ್ಚತ್ತಿದ್ದವರು ಮೂರು ನಾಲ್ಕು ಜನ ಮುದುಕ-ಮುದುಕಿಯರು. ನನ್ನನ್ನು ತಂದ ಸಾಧು ಸತ್ಪುರುಷ ಅರೆನಿದ್ದೆಯಲ್ಲಿ ಎಚ್ಚತ್ತು ತನ್ನ ತೊಡೆಗಳ ಮೇಲೆ ಕೈಯಾಡಿಸಿ ಕೊಂಡನು. ಬೆದರಿ ಕೊಡಹಿಕೊಂಡು ಮೇಲೆದ್ದನು. ಹೌಹಾರಿದ ಗಡ್ಡ ಮೀಸೆ ಹುಬ್ಬು ರೆವೆಗೂದಲುಗಳು ತೂರಾಡಿದವು ಆದರೆ ಹಕ್ಕಿ ಹಾರಿ ಹೋಗಿದ್ದಿಲ್ಲ. ಪಕ್ಕ ಬಲಿಯದ ಹಕ್ಕಿ ಎತ್ತಿಕೊಂಡವರ ಕೈಗೂಸು. ಆಡಿಸು ವವರ ಹಸುಗೂಸು. ಹಾಲುಣಿಸುವವರ ಬಗಲಗೂಸು. ತಟ್ಟಿ ಮಲಗಿಸು ವವರ ಕಂಕುಳಕೂಸು. ಸಾಧು ಸತ್ಪುರುಷನು ಬರ್‍ರನೆ ನನ್ನನ್ನೆತ್ತಿಕೊಂಡು ತನ್ನ ಕಾವಿಯ ಮೇಲು ಹೊದಿಕೆಯಲ್ಲಿ ಬಚ್ಚಿಟ್ಟುಕೊಂಡನು. ಹರಪ್ರಸಾದನಿಗೆ ಸತ್ಪುರುಷನ ವಕ್ಷಸ್ಥಳದಲ್ಲಿ ಆಶ್ರಯ. ತಂದೆ ಎಲ್ಲಿಯೋ ಆದನು. ತಾಯಿ ಎಲ್ಲಿಯೋ ಆದಳು. ತನ್ನವರು ಎಲ್ಲೆಲ್ಲಿಯೋ ಆದರು. ಹರಪ್ರಸಾದನು ಈಗ ಸಾಧು ಜನರ ಸತ್ ಸಹವಾಸಕ್ಕೆ ಬಂದಿದ್ದಾನೆ. ಗಾಡಿಯೆಲ್ಲಿಗೆ

ಹೊರಟಿದೆ, ತಾನೆಲ್ಲಿಗೆ ಹೊರಟಿದ್ದಾನೆ? 'ಡೆಹರಿ-ಓನ್-ಸೋನ್' ಎಂಬ ಶಬ್ದದ ಹೊರತು ಮತ್ತೊಂದು ಊರಿನ ಹೆಸರು ಕೇಳದ ಉಚ್ಚರಿಸದ ಹಸುಗೂಸು, ಬುದ್ಧಿ ಬಲಿಯದ ಬಾಲಕ. ನ್ಯಾಯಾನ್ಯಾಯಗಳ ತಿಳುವಳಿಕೆ ಯಿಲ್ಲದ ಪ್ರಾಣಿ ಮಾತ್ರ. ತಾಯಿ ತಂದೆಯನ್ನು ಬಿಟ್ಟು ಇನ್ನೊಬ್ಬರಿಗೆ ತನ್ನ ಹಸಿವು ನಿದ್ರೆ ನೀರಡಿಕೆಗಳನ್ನು ತಿಳಿಸಲು ಇಷ್ಟು ದಿನ ಪ್ರಸಂಗಗಳನ್ನು ತಂದುಕೊಂಡಿರದ ಬಡಪಾಯಿ. ಬರಿದಾದ ಹೊಟ್ಟೆ. ಕೇಳಲು ಬಾಯಿಯೇ ಇಲ್ಲ. ಹಾಗೆಯೇ ಸೊರಗಿನಲ್ಲಿ ಕಣ್ಣುಮುಚ್ಚಿದೆ. ಹಗಲುಗನಸು. ನನ್ನ ತಾಯಿಯ ಕೂಡ ನಾನು ಸಿಟ್ಟುಮಾಡಿಕೊಂಡಿದ್ದೇನೆ. ನನಗೆ ಈ ದಿನ ಸಿಹಿಯೂಟ ಕೊಟ್ಟಿಲ್ಲ. ಊಟವೇ ಬೇಡ. ಮೂಲೆಯಲ್ಲಿ ಹೋಗಿ ಮುದುಡಿಕೊಂಡ ಮಲಗಿದ್ದೇನೆ. ಹಾಗೆಯೇ ನಿದ್ರೆ ಹತ್ತಿಬಿಟ್ಟದೆ.

ಬಹಳ ಸಮಯದ ಅನಂತರ ನನ್ನನ್ನು ಎಬ್ಬಿಸಿದವರು ನನ್ನ ತಾಯಿಯಲ್ಲ. ತಂದೆಯಲ್ಲ. "ಬೇಟಾ" ಎಂದು ಯಾರು ಎಬ್ಬಿಸಿದರು? ಗಡ್ಡ ಮೀಸೆಗಳಲ್ಲಿ ಮಿಸುಗಿದ ಎರಡು ರಕ್ಕಸ ತುಟಿಗಳು. ರೆಪ್ಪೆಗಳಲ್ಲಿ ಮಿಸುಗಿದ ಎರಡು ಪಶು ಕಣ್ಣುಗಳು.

ನಾವು ಗಾಡಿಯಿಂದಿಳಿದೆವು. ಸಾಧು ಮಹಾರಾಜ ಸರಸರನೆ ನನ್ನನ್ನು ಎತ್ತಿಕೊಂಡು ಅವರು ಹೊರಗೆ ಹೋಗುವ ವಿಶಿಷ್ಟ ಹಾದಿಯಿಂದ ಹೊರಬಂದರು. ಜನಸಮೂಹದಲ್ಲಿ ಕೂಡಿಕೊಂಡು ರಪರಪನೆ ಹೆಜ್ಜೆ ಹಾಕುತ್ತ ಒಂದು ಮಠಕ್ಕೆ ಬಂದರು. ಇನ್ನೂ ಅವರು ಮಂದಿರದ ಬಾಗಿಲನ್ನು ಮುಟ್ಟುತ್ತಿರುವಾಗಲೇ, ಹತ್ತೆಂಟು ಜನ ತರುಣ ವಯಸ್ಸಿನ ಸಾಧು ಮಹಾರಾಜರು ಬಂದು ನಮ್ಮ ಹಿರಿಯ ಮಹಾರಾಜರ ಪಾದಕ್ಕೆರಗಿ ದರು ಅವರಲ್ಲೊಬ್ಬನು ನನ್ನನ್ನು ಕರೆದುಕೊಂಡು ಹೋಗಿ ಒಂದು ಮೂಲೆ ಯಲ್ಲಿ ಕುಳ್ಳಿರಿಸಿದನು. ಎಲ್ಲರೂ ಬಂದು ನನ್ನ ಮುಖದಲ್ಲಿ ಕಣ್ಣಿಟ್ಟು ನೋಡಿದರು. ಒಬ್ಬನು ನನ್ನ ಗದ್ದವನ್ನು ಹಿಡಿದು ನೋಡಿದರೆ, ಇನ್ನೊಬ್ಬನು ಎದೆ ಮುಟ್ಟಿ ನೋಡುವನು. ಒಬ್ಬನು ನನ್ನ ತಲೆ ಎತ್ತಿ ನೋಡಿದರೆ, ಇನ್ನೊಬ್ಬನು ನನ್ನ ಬೆನ್ನ ಮೇಲೆ ಸವರಿ ನೋಡುವನು. ಈ ಪರೀಕ್ಷೆಯನ್ನು ನೋಡಿದಾಗ ನನಗೆ ನಮ್ಮ ಮನೆಯಾಳಿನ ನೆನಪು ಬಂದಿತು.

ಒಮ್ಮೆ ನನ್ನ ಮನೆಯಾಳು ನನ್ನನ್ನು ಕರೆದುಕೊಂಡು ಪೇಟೆಯಲ್ಲಿ ಹೋಗಿದ್ದನು. ಆ ದಿನ ಅವನು ತನ್ನ ಮನೆಗಾಗಿ ಒಂದು ಹಸುವನ್ನು ಕೊಳ್ಳಬೇಕಿತ್ತು. ಅವನು ಅದರ ಪರೀಕ್ಷೆ ಮಾಡಿದ ನೆನಪು ಇಂದು ಬಂದಿತು

ತರುಣ ಸಾಧುಗಳಲ್ಲೊಬ್ಬನು ಉಳಿದವರಿಗೆ ಹೇಳಿಯೇ ಬಿಟ್ಟನು. "ಈ ಹುಡುಗ ಬಹಳ ಸುಂದರ, ಬಹಳ ಚುರುಕು, ಬಹಳ ಗಟ್ಟಿಗ. ಇವನಿಗೆ ಮುಂಬಯಿಯಲ್ಲಿ ಬಹಳ ಬೆಲೆಯಿದೆ. ಗುರೂಜಿ ಈ ಸಾರೆ ಬಹಳ ಕಷ್ಟ ಪಟ್ಟಿದ್ದಾರೆ. ಒಳ್ಳೆಯ ವಸ್ತುವನ್ನೇ ಹುಡುಕಿದ್ದಾರೆ.'' ಹೀಗೆಂದು ಹಿಂದಿಯಲ್ಲಿ ಅವರು ಮಾತನಾಡಿದ್ದುದು ನನಗೆ ಇಂದಿಗೂ ನೆನಪಿದೆ. ಗುರೂಜಿ ಬಂದರು ಸ್ನಾನ ಮಾಡಿ. ಅವರ ಮುಖದಲ್ಲಿ 'ಭಯಂಕರ ಉತ್ಸಾಹ'. ಒಂದು ಹುಲಿ ಹಿಡಿದು ತಂದವರಂತೆ ಅವರು ಎದೆ ಸೆಟೆಸಿ ಮಂದಿರದ ಗರ್ಭ ಗುಡಿಯನ್ನು ಪ್ರವೇಶಿಸಿದರು. ನೆತ್ತಿಯ ಮೇಲೆ ತೂಗಾಡುತ್ತಿದ್ದ ಗಂಟೆಗಳನ್ನು ಅವರು ಬಡಿದುದರ ರೀತಿ ಶೀವಿ ಬಹಳ ಪೌರುಷದಿಂದ ಕೂಡಿದ್ದವು. ಇಡೀ ಮಂದಿರವು ಗಂಟೆಗಳ ನಾದದಿಂದ ಮೊಳಗಿತು. 'ನಮೋ ನಮಃ ಮಹಾಲಕ್ಷ್ಮೀ' ಎಂದು ಅವರು ಅಡ್ಡ ಬಿದ್ದರು ಮಹಾತಾಯಿಯ ಸಮ್ಮುಖದಲ್ಲಿ. ಸಾಧುಗಳು ಅದೇ ಜಯಘೋಷದಿಂದ ಮಂದಿರವನ್ನು ನಡುಗಿಸಿದರು. ನನಗೆ ಆಗ ಅವರೊಡನೆ ದೇವೀ ಪೂಜೆ ಮಾಡಲು ಆಗಲಿಲ್ಲ. ನನಗೆ ಲಕ್ಷ್ಮಿ ಯಾರು, ಕಾಳಿ ಯಾರು, ಭದ್ರೆ ಯಾರು ಎಂಬುದು ಆಗ ಏನೂ ಗೊತ್ತಿದ್ದಿಲ್ಲ.

ಈಗ ಮಹಾಲಕ್ಷ್ಮಿಯ ಮಹಿಮೆಯನ್ನು ನಾನು ಚೆನ್ನಾಗಿ ಅರಿತಿದ್ದೇನೆ. ಅವಳೇನು ! ಯಾರು ಅವಳನ್ನು ಪೂಜಿಸುವರೋ ಅವರಿಗೆ ಒಲಿಯುವಾಕೆ ! ನಾನೂ ಈ ಐದು ವರ್ಷಗಳಲ್ಲಿ ಅವಳನ್ನು ವಿವಿಧ ರೀತಿಯಲ್ಲಿ ಪೂಜಿಸಿದ್ದೇನೆ. ಒಲಿಸಿಕೊಂಡಿದ್ದೇನೆ. ಕೊಲ್ಲಾಪುರದ ಮಹಾಲಕ್ಷ್ಮಿಯನ್ನಂತೂ ನಾನು ಪೂರ್ಣ ಒಲಿಸಿಕೊಂಡಿದ್ದೆನು. ನಾನು ಇದ್ದ ಒಂದು ತಿಂಗಳಲ್ಲಿ ಕೊಲ್ಲಾಪುರದ ಲಕ್ಷ್ಮಿ ನನಗೆ ಒಂದು ಸಾವಿರ ರೂಪಾಯಿಗಳನ್ನು ಕೊಡಿಸಿದ್ದಳು. ನಾನು ತಂದು ಆಶ್ರಮದ ಮುಖ್ಯಸ್ಥನಿಗೆ ಧರ್ಮಶಾಲೆಯಲ್ಲಿ ಒಪ್ಪಿಸುತ್ತಿದ್ದೆನು. ಇರಲಿ.

ಸಾಧು ಮಹಾರಾಜರು ಎದ್ದು ಕುಳಿತು ಮಹಾತಾಯಿಯನ್ನು ಪೂಜಿಸಿದರು. ಹೂವು ಹಾಲು ಹಣ್ಣು ಧೂಪ ಒಂದೇ ಎರಡೇ ಒಪ್ಪಿಸಿದ್ದು.

ತಿಳಿತೆಯಿಲ್ಲ. ತರುಣ ಸನ್ಯಾಸಿಯರು ಜೋಳಿಗೆಯಿಂದ ತೆಗೆದು ಕೊಟ್ಟಂತೆ ದೇವಿಗೆ ಅರ್ಪಣವೇ ಅರ್ಪಣ. ಅಂತೂ ಕೊನೆಗೊಮ್ಮೆ ಪೂಜಾ ಪುನಸ್ಕಾರ ಗಳು ಮುಗಿದವು. ಶಿಷ್ಯಂದಿರಿಗೆ ಗುರುಗಳ ಆಜ್ಞೆಯಾಯಿತು. ಶಿಷ್ಯಂದಿರು ನನ್ನನ್ನೆತ್ತಿ ಕೊಂಡು ತಂದರು ಸಾರ್ವಜನಿಕ ನೀರಿನ ಬಾವಿಗೆ. ನನ್ನ ಸ್ನಾನದ ನೆನಪು ನಾನು ಮರೆಯುವಂತಿಲ್ಲ. ಗಂಡಸಿಗೆ (ಗೃಹಸ್ಥಾಶ್ರಮಿಗೆ) ಕೆಲವಾದರೂ ಸಂಸ್ಕಾರಗಳು ಹೆಣ್ಣುಮಕ್ಕಳಿಗೆ ಸಂಬಂಧಿಸಿದವು ಪರಿಚಯವಿಚಿತ್ರವೆ. ಆದರೆ ಈ ಬಟ್ಟೆ ಬಯಲಿನ ಬೈರಾಗಿಗಳಿಗೆ ಸಣ್ಣಮಕ್ಕಳ ಲಾಲನೆ ಪಾಲನೆ ಎಂತಃ ಪರಿಚಯ. ಅವರು ಪೀಕಲಾಟ ಮಾಡುವದನ್ನು ಕಂಡರೆ ಎಂತಹರೂ ನಗಬಹುದು. ಅಂತೂ ಇಂತೂ ಮಾಡಿ ನನ್ನ ಸ್ನಾನದ ನೇಮವನ್ನು ಮುಗಿಸಿದರು. ನನಗೆ ನಡುಗು ಹುಟ್ಟಿತು. ನನಗೆ ಕಾವಿಯ ಪಂಚೆ ಯೊಂದನ್ನು ಸುತ್ತಿದರು. ಮಂದಿರಕ್ಕೆ ತಂದರು. ಗುರುಗಳು ನನ್ನನ್ನು ಮುಂದಕ್ಕೆ ಕರೆದರು. ನನ್ನೆದುರು ಒಂದು ಬಟ್ಟಲು ಹಾಲು ಒಂದಿಷ್ಟು ಸಕ್ಕರೆ ಇಟ್ಟರು. ನಾನು ಸುಮ್ಮನೆ ಬಟ್ಟಲಿನಲ್ಲಿ ಕಣ್ಣಿಟ್ಟು ಕುಳಿತೆನು. ಗುರುಗಳು ಗುಡುಗಿದರು. ಬಟ್ಟಲಿಗೆ ಕೈ ಹಾಕಿದೆ. ಕೈಗಳು ನಡುಗುವದನ್ನು ಕಂಡು ಒಬ್ಬ ಶಿಷ್ಯನು ಅದನ್ನೆತ್ತಿ ನನ್ನ ಬಾಯಿಗೆ ಹಚ್ಚಿದನು. ನನಗೆ ಎರಡು ಗುಟುಕು ಕುಡಿಯುವದಾಗಲಿಲ್ಲ. ನನ್ನ ಗಂಟಲು ಒಣಗಿ ಹೋಗಿತ್ತು. ಗುರು ಮುಂಗೈ ನಾಡಿ ನೋಡಿ ನನ್ನ ಎದೆ ಮುಟ್ಟಿ ನೋಡಿದನು. ತನ್ನ ಜೋಳಿಗೆ ತರಿಸಿ, ಹಾಲಿನಲ್ಲಿ ಒಂದಿಷ್ಟು ಕೇಸರಿ ಪುಡಿಯನ್ನು ಹಾಕಿದನು- ಶಿಷ್ಯನೊಬ್ಬನು ನನ್ನ ಮೂಗು ಹಿಡಿದು ಕುಡಿಸಿಯೇ ಬಿಟ್ಟನು. ನನ್ನನ್ನು ಕರೆದೊಯ್ದು ಮೂಲೆಯಲ್ಲಿ ಹೊಚ್ಚಿ ಮಲಗಿಸಿದರು. ನನಗೆ ಅದೊಂದೇ ಗೊತ್ತು. ಅನಂತರ ನನ್ನ ಮಿದುಳಿನ ಸಂಚಾರ ಮಾತ್ರ. ದೇಹ ಪೂರ್ಣ ಸ್ವಸ್ಥ ನಿದ್ರೆ ಮಾಡಿರಬೇಕು. ಮಿದುಳಿನ ಸಂಚಾರದಲ್ಲಿ ನನ್ನ ತಾಯಿಯು ಕೂಡ ನನ್ನ ಸರಸ, ತಂಗಿ ತಮ್ಮಂದಿರ ಕೂಡ ವಿನೋದ. ನನ್ನ ಅಕ್ಕ ಅಣ್ಣಂದಿ ರೊಡನೆ ಚಿನ್ನಾಟ, ತಂದೆಯೊಂದಿಗೆ ರೇಲ್ವೆ ನಿಲ್ದಾಣದಿಂದ ಮರಳಿ ಮನೆಗೆ ಹೋಗುವಾಗ ಅಂಗಡಿಯಲ್ಲಿ ತಿಂಡಿ ತಿನಸು ಕೊಂಡುದು. ಹೀಗೆ ಅನೇಕ ರೀತಿ ನನ್ನ ಮನಸ್ಸು ಏನೇನೋ ಕಲ್ಪಿಸಿಕೊಂಡು ಆಡ್ದಾಡಿತು ಅಷ್ಟೇ.

ಹರಪ್ರಸಾದನ ಮುಂದಿನ ಜೀವನಕ್ಕೂ ಈ ಮನಸ್ಸಿನ ಹರಿದಾಟಕ್ಕೂ ಯಾವ ಸಂಬಂಧವೇ ಇಲ್ಲ. ಇಷ್ಟು ಮಾತ್ರ ನಿಜ. ನಾನು ಎಚ್ಚತ್ತಾಗ ದೊಡ್ಡ ಪಟ್ಟಣದಲ್ಲಿ ಒಂದು ಅತಿದೊಡ್ಡ ಮನೆ-ಬಂಗ್ಲೆಯಲ್ಲಿದ್ದೆನು. ಈಗ ನನಗೆ ಗೊತ್ತು. ಅದು ಮುಂಬಯಿ ನಗರ, ಆ ಮನೆಯೇ ಅನಾಥಾಶ್ರಮ. ನನ್ನನ್ನು ಅಲ್ಲಿ ಒಪ್ಪಿಸಿ, ಸಾಧುಮಹಾರಾಜ ಬಹಳ ಹಣವನ್ನು—ನೋಟಿನ ಪುಡಿಕೆಯನ್ನು—ಪಡೆದುಕೊಂಡು ಹೋಗಿಯೇ ಬಿಟ್ಟನು. ನಾನು ಆ ಗುರುಗಳನ್ನು ಇಲ್ಲಿಯ ತನಕ ನೋಡಲು ಸಾಧ್ಯವಾಗಿಲ್ಲ. ಅವರ ವಿಷಯ ಯಾರಿಂದಲೂ ತಿಳಿದುಕೊಳ್ಳುವದೂ ಸಾಧ್ಯವಾಗಿಲ್ಲ. ಇಂದಿಗೂ ನನಗೆ ಕಾವಿಯ ಅರಿವೆ, ಅದನ್ನು ತೊಟ್ಟ ಮನುಷ್ಯನೆಂದರೆ ಮೈ ಉರಿಯುತ್ತದೆ."

(೪)

"ಮುಂಬಯಿ ಅನಾಥಾಶ್ರಮವೂ ಒಂದು ನುರಿತ ಕೈಚಳಕದ ಮಹಿಮರ ಗುಂಪು. ಇಲ್ಲಿಯ ಹಿರಿಯನು ಮುಂಬಯಿಯೊಳಗೆ ಪ್ರಸಿದ್ಧ ವರ್ತಕರಲ್ಲಿ ಒಬ್ಬನು. ಇವನು "ದಯೆ"ಯನ್ನು ಒಂದು ಹಿರಿಯ ವ್ಯಾಪಾರಿ ವಸ್ತುವಿನಂತೆ ಉಪಯೋಗಿಸುತ್ತಾನೆ. ಈ "ದಯೆ"ಗೆ ಜಗತ್ತಿನ ಎಲ್ಲ ವ್ಯಾಪಾರಗಳಿಗಿಂತಲೂ ಹೆಚ್ಚಿನ ಬೆಲೆಯಿದೆಯೆಂಬುದನ್ನು ಆತ ಅನುಭವದಿಂದ ಕಂಡುಕೊಂಡಿದ್ದಾನೆ. ಈ "ದಯೆ" ಯ "ಎದೆಬಿಲ್ಲೆ" (Badge)ಯನ್ನು ಹಚ್ಚಿಕೊಂಡು ಜಗತ್ತಿನ ಎಲ್ಲ ತರಗತಿಯ ಜನರನ್ನು ಹಗುರಾಗಿ ತನ್ನ ಕಿಸೆಗೆ ಹಾಕಿಕೊಳ್ಳಬಹುದೆಂದು ಆತನು ಪ್ರಯೋಗ ಮಾಡಿ ಯಶಸ್ಸು ಪಡೆದಿದ್ದಾನೆ. ಮುಂಬಯಿ ಗವ್ಹರ್ನರ, ಮುಖ್ಯಮಂತ್ರಿ, ಮೇಯರ, ಇನಸ್ಪೆಕ್ಟರ ಜನರಲ್ ಆಫ್ ಪೋಲೀಸ, ಹಾಯಕೋರ್ಟ ನ್ಯಾಯಾಧೀಶರು; ದಿಲ್ಲಿಯಲ್ಲಿ ರಾಷ್ಟ್ರಪತಿ ಪ್ರಧಾನಾಮಾತ್ಯ, ಹೀಗೆ ಒಬ್ಬರೇ ಇಬ್ಬರೇ ಯಾರು ಬೇಕಾದವರು ಇರಲಿ ಅವರು ಈತನ ಜೋಳಿಗೆಗೆ ತಮ್ಮ ಕೈಮುಂದೆ ಮಾಡಿ ನೀಡಲೇಬೇಕು. ಇವನು ಮಾಡುತ್ತಿರುವ ದೇಶಸೇವೆಗೆ ಎಲ್ಲ ಗೌರವದ ಪದವಿ ಪದಕಗಳು ಮೀಸಲು.

ಇವನಿಗಾಗಿ ತನ್ನ ಸ್ವಂತ ಉದ್ಯಮದಲ್ಲಿ ವಿಶಿಷ್ಟ ಸವಲತ್ತುಗಳು. ಹೀಗೆ ಒಂದಿಲ್ಲೊಂದು ರೀತಿಯಿಂದ ಈತನ "ದಯೆ" ಇವನಿಗೆ ಒಂದು ಒಳ್ಳೆಯ ಮಾರುಕಟ್ಟೆಯ ವಸ್ತುವಾಗಿದೆ. (Market commodity) ಈತನ ದರ್ಶನ ನನಗೆ ನಾನು ಆಶ್ರಮದಲ್ಲಿ ಕಾಲಿಟ್ಟ ದಿವ ಸಾಯಂಕಾಲ ಸಿಕ್ಕಿತು. ನನ್ನ ಹೆಸರು ದೆಸೆ ಆತನ ನಾಲಿಗೆಯ ಮೇಲೆ ಕುಣಿಯುತ್ತಿತ್ತು. ನನ್ನ ಬೆನ್ನ ಮೇಲೆ ಕೈಯಾಡಿಸುತ್ತ ಮುಗುಳು ನಗೆಯೊಂದನ್ನು ಎಲ್ಲಿಂದಲೋ ಹಿಡಿದು ತಂದು ತನ್ನ ಮುಖದ ಮೇಲೆ ತೇಲಿಬಿಟ್ಟನು. ಆಹಾ ! ಆ ನಗೆಯ 'ವೈಖರಿ'. ಆ ಯದ ಕುರಿಮರಿಯಿದ್ದರೆ ಸುಮ್ಮನೆ "ಮ್ಯಾ !'' ಎಂದು ಆ ಅಡಕತ್ತಿಗೆ ತನ್ನ ಕುತ್ತಿಗೆಯನ್ನು ಇಟ್ಟು ಸುಖವಾಗಿ ನಿದ್ರಿಸಬೇಕು. ನನಗಂತೂ ಅಲ್ಲಿ ತೋಳನ ಕೆಂಪು ನಾಲಿಗೆ ಉರಿಯು ಕಣ್ಣು ಹದನ ಹಲ್ಲುಗಳು ಕಂಡವು. ಮನುಷ್ಯ ಹೀಗೂ ಇರಬಹುದೆಂದು ನನಗೆ ಆ ಸಾಧುಗಳ ಸಹವಾಸ ಮಾಡಿದಾಗ ಈ ಸಿರಿವಂತಿಕೆಯ ಸೋಗು ನೋಡಿದಾಗ ಮಾತ್ರ ಖಚಿತವಾಗತೊಡಗಿತು. ಈ ಅನಾಥಾಶ್ರಮದ ಅಧ್ಯಕ್ಷ ಅಂದು ಎಲ್ಲ ಮಕ್ಕಳಿಗೆ ತಿಂಡಿ ತಿನಸುಗಳನ್ನು ಹಂಚಿದನು ನಾನು ಮುಟ್ಟಲಿಲ್ಲ ಒಬ್ಬ ಸಣ್ಣ ಬಾಲಿಕೆಗೆ ನನ್ನ ಪಾಲಿನದನ್ನು ಕೊಟ್ಟು ಬಿಟ್ಟೆನು. ಧೂರ್ತ ಅಧ್ಯಕ್ಷನು ನನ್ನ "ಕಳೆ ಕಟ್ಟಿದನು". ಈ ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದಾಗುವಂತಿದೆ ಎಂದು ಕಂಡುಕೊಂಡನು. ಈ ಮೂರ್ತಿಯನ್ನು ಇಲ್ಲಿ ಹಿಡಿದಿಡುವದೆಂತು ಎಂದು ಯೋಚಿಸಹತ್ತಿದನೆಂದು ನನಗೆ ಅವನ ಮುಖಮುದ್ರೆಯಿಂದ ಕಂಡು ಬಂದಿತು.

ಆಶ್ರಮದ ಮೇಲ್ವಿಚಾರಕರನ್ನೆಲ್ಲ ತನ್ನ ಕೊಠಡಿಗೆ ಕರೆಯಿಸಿ ದೀರ್ಘ ವಿಚಾರ ಮಾಡಿದನು.

ವಿಚಾರ ವಿನಿಮಯದ ಅನಂತರ ಎಲ್ಲರೂ ಹೊರಬಂದು ತಮ್ಮ ತಮ್ಮ ಕಾರ್ಯಗಳಿಗೆ ಸಾಗಿದರು. ಅಧ್ಯಕ್ಷನು ಒಂದೂ ಮಾತನ್ನು ಆಡದೆ, ಸರಸರನೆ ಹೊರಗೆ ಹೋಗಿ ತನ್ನ ಮೋಟಾರಿನಲ್ಲಿ ಕುಳಿತುಕೊಂಡು ಹಿರಿಯ ಮೇಲ್ವಿಚಾರಕನನ್ನು ಕರೆಯಿಸಿಕೊಂಡನು. ಮಾತು ಕತೆ ಮುಗಿಸಿ ಅಧ್ಯಕ್ಷರ ಮೋಟಾರು ಹೋಯಿತು. ಹಿರಿಯ ಮೇಲ್ವಿಚಾರಕರ ಹೆಸರು ಮೋತಿಭಾಯಿ. ಆತನ

ಕೈಕೆಳಗೆ ಇಬ್ಬರು ಕಾರಕೂನರು. ಇಬ್ಬರು ಅಡಿಗೆಯವರು. ಇಬ್ಬರು ಹೆಣ್ಣಾಳುಗಳು. ಇಬ್ಬರು ಗಂಡಾಳುಗಳು. ಇಬ್ಬರು ದ್ವಾರಪಾಲಕರು.

ಮೋತಿಭಾಯಿ ತೀರ ಕಟುಕ. ಅವನ ಕಾರ್ಯ ಕೇವಲ ಜಿಗಳೆಯಂತೆ ತನ್ನ ಕೈಕೆಳಗಿನವರ ರಕ್ತ ಹೀರುವದು. ಅವು ಹೊಟ್ಟೆ ಪಾಡಿಗಾಗಿ ಇಬ್ಬರು ಮಾಡುವ ಕಾರ್ಯವನ್ನು ಒಬ್ಬರೇ ಮಾಡಬೇಕು. ಆಶ್ರಮದ ಸುತ್ತು ಹೂ ಹಣ್ಣಿನ ಕಾಯಿಪಲ್ಲೆ ತೋಟ. ಅದರ ಬೆಳೆಯಿಂದಲೇ ಎಲ್ಲ ಆಶ್ರಮವಾಸಿಗಳ ಉದರಂಭರಣೆ ಸಾಗಬಹುದು. ಆದರೆ ಅದರ ಒಂದು ಕಡ್ಡಿಯನ್ನೂ ಆಶ್ರಮಕ್ಕಾಗಿ ಉಪಯೋಗಿಸುವದಿಲ್ಲ. ಬೆಳೆಯ ಹಂಚಿಕೆ ಹೇಗಾಗುವದೆಂಬದನ್ನು ನಾನು ತಿಳಿದುದು ಒಂದು ವರ್ಷದ ಹಿಂದೆ. ಅದಿರಲಿ.

ನನ್ನ ಪ್ರವೇಶದಿಂದ ಆಶ್ರಮದಲ್ಲಿದ್ದ ಒಬ್ಬ ಹೆಣ್ಣುಮಗಳು ಮಾತ್ರ ಬಹಳ ಮರುಗಿದಳು. ಅವಳ ಹೆಸರು ಮೀರಾಬೆನ್. ಮೀರಾಬೆನ್ ವಿಧವೆ. ಆಶ್ರಮಕ್ಕೆ ಅವಳನ್ನು ಹಿಂದಿನ ರಾತ್ರಿ ಎರಡು ಗಂಟೆಗೆ ತರಲಾಗಿತ್ತು. ಅವಳು ಗುಜರಾತದ ಹಳ್ಳಿಯವಳು. ಅವಳ ಕರುಣ ಕತೆ ನನ್ನ ಜೀವನದಲ್ಲಿ ಎಂದಿಗೂ ಮರೆಯದ ಕತೆ. ನನಗೆ ಆ ಕತೆ ತಿಳಿದುದು ಕಾಲಕ್ರಮೇಣ. ನಾನು ದೊಡ್ಡವನಾದಂತೆ ಒಂದೊಂದೇ ವಿಷಯಗಳನ್ನು ನನಗೆ ಮೀರಾಬೆನ್ ಹೇಳಿದುದು. ಆ ದಿನ ಆಕೆಯೇ ನನ್ನ ಊಟ ಉಡಿಗೆ ನಿದ್ರೆಯ ಮೇಲ್ವಿಚಾರಣೆ ಮಾಡಿದಳು. ಅವಳು ಮಲಗುವಾಗ ಆಶ್ರಮದ ಎಲ್ಲ ಮಕ್ಕಳನ್ನೂ ಸುತ್ತು ಹಾಕಿಕೊಂಡು ತಾನು ಮಧ್ಯದಲ್ಲಿ ಮಲಗಿದಳು. ಮುಂದೆ ಇದೇ ಪರಿಪಾಠವನ್ನೇ ಆಕೆ ಅನುಸರಿಸಹತ್ತಿದಳು. ಮೀರಾಬೆನ್ ನಸುಗೆಂಪಿನ ಇಪ್ಪತ್ತರ ತರುಣ ವಿಧವೆ. ಈಗ ನನ್ನ ಎತ್ತರದಷ್ಟು ಆಕೆಯ ನಿಲುವು. ಮೈಕೈಯಿಂದ ದಪ್ಪಪುಷ್ಟವಲ್ಲದಿದ್ದರೂ ಬಡಕಲು ಮಾತ್ರ ಅಲ್ಲ. ಹಳ್ಳಿಯ ಹೊಲಗಳಲ್ಲಿ ದುಡಿದುಂಡ ಒಕ್ಕಲಿಗ ಹೆಣ್ಣುಮಗಳು. ಅವಳನ್ನು ಮುಂಬಯಿಗೆ ತಂದವರು ಆಶ್ರಮದ ಅಧ್ಯಕ್ಷ. ಹಳ್ಳಿಯಲ್ಲಿ ಈಕೆ ಹೊಲದಲ್ಲಿ ಕೂಲಿ ಮಾಡಿಕೊಂಡು ತನ್ನ ತಂದೆಯೊಂದಿಗೆ ಚಿಕ್ಕ ಮನೆಯಲ್ಲಿದ್ದಳು. ಇವಳು ಮದುವೆಯಾದ ಎರಡು ತಿಂಗಳಿಗೆ ಇವಳ ತಾಯಿ ತೀರಿಕೊಂಡಳು. ತಂದೆಗೆ ಇವಳೊಬ್ಬಳೇ ಆಧಾರ. ಇವಳ ಗಂಡನೂ ತನ್ನ ತಂದೆ ತಾಯಂದಿರಿಗೆ ಒಬ್ಬನೇ ಮಗ.

ಅವರು ಮೊದಲೇ ತೀರಿಕೊಂಡಿದ್ದರು. ಹಳ್ಳಿಯ ಹಿರಿಯರು ವಿಚಾರಮಾಡಿ ಈ ವಿವಾಹವನ್ನು ಹೊಂದಿಸಿದ್ದರು. ಇವಳು ಇವಳ ತಂದೆ ಇವಳ ಗಂಡ ಮೂವರೂ ಒಂದೇ ಊರಿನಲ್ಲಿ ಒಂದೇ ಮನೆಯಲ್ಲಿ ಇರಹತ್ತಿದರು. ಇವಳ ಗಂಡನಿಗೆ ಕಾಲರಾ ಪೀಡೆ ಬಡಿದು ಅವನನ್ನು ಕಿತ್ತುಕೊಂಡು ಹೋಯಿತು. ಗತಿ ಗಾಣವೆ ಎಂತೋ ತಂದೆ ಮಗಳು ಸಂಸಾರವನ್ನು ದೂಡಿಕೊಂಡು ಹೊರಟಿದ್ದರು. ಆದರೆ ಕಾಲನಿಗೆ ಇದೂ ರುಚಿಸಲಿಲ್ಲ. ತಂದೆಗೆ ಮಲೇರಿಯಾ ಬೇನೆ ಉಲ್ಬಣಿಸಿ ಉಸಿರು ಹೀರಿಹೋಯಿತು. ಈ ವಿಧವೆ ತಂದೆಯನ್ನು ಕಳೆದುಕೊಂಡು ಇನ್ನು ಒಂದು ವಾರವಾಗಲಿಲ್ಲ. ಈಕೆಗೆ ಪಟ್ಟಣದ ಕರೆ ಬಂದಿತು. ಆಶ್ರಮದ ಅಧ್ಯಕ್ಷನ ಹೊಲಗಳು ಈ ಮೀರಾಬೆನ್‌ಳ ಹಳ್ಳಿಯಲ್ಲಿ ಹೆಚ್ಚು. ಈ ಅಧ್ಯಕ್ಷನು ಹಳ್ಳಿಗೆ ಹೊಲದ ವಿಚಾರದಲ್ಲಿ ನಿರ್ಣಯ ತೆಗೆದುಕೊಳ್ಳಲು ಹೋಗಿದ್ದನು. ಹೊಲದಲ್ಲಿ ದುಡಿಯುತ್ತಿದ್ದ ಎಳೆಯ ಹೆಣ್ಣುಮಗಳನ್ನು ಕಂಡು ಇವನ ಕಣ್ಣುಗಳು "ನೀರಸಾಗರದ ಕೆರೆಯಷ್ಟು" ಅಗಲವಾದವು. ಅವಳ ಒಡಪಾಡಿನ ಕತೆಯನ್ನು ಕೇಳಿ "ಮಮ್ಮಲ ಮರುಗಿದನು." ತನ್ನ ಮನೆಯಲ್ಲಿ ಅಡಿಗೆ ಮೊದಲಾದ ಕಾರ್ಯ ಮಾಡುವದಾದರೆ ಯೋಗ್ಯ ಸಂಬಳ, ಊಟ, ಉಡಿಗೆ ಕೊಡುವದಾಗಿ ತಿಳಿಸಹೇಳಿದನು. ಆ ಬಡಪಾಯಿ ಈ ಬಿಳಿಗೂದಲಿನ ''ತಪಸ್ವಿ''ಯನ್ನು ನಂಬಿ ಒಪ್ಪಿದಳು. ಅಧ್ಯಕ್ಷರ ಮನೆಗೆ ಈ ಮೀರಾಬೆನ್ ಬಂದಳು. ವಿಶೇಷ ಆದರವನ್ನು ಕಣ್ಣಾರೆ ಕಂಡ ಅಧ್ಯಕ್ಷನ ಹೆಂಡತಿ ಅಧ್ಯಕ್ಷನಿಗೆ ಬುಟ್ಟಿಯಷ್ಟು ಬೈದು, ನಿಂತ ಹೆಜ್ಜೆಯ ಮೇಲೆ ''ಈ ಹೆಣ್ಣನ್ನು" ಹೊರಗೆ ಹಾಕಿದಳು. ಅಧ್ಯಕ್ಷ ಆಶ್ರಮಕ್ಕೆ ಫೋನ ಮಾಡಿ ಮೋತಿಬಾಯಿಯನ್ನು ಕರೆಯಿಸಿಕೊಂಡು ಅವನೊಂದಿಗೆ ಇವಳನ್ನು ಆಶ್ರಮಕ್ಕೆ ಕಳಿಸಿದನು.

''ದಯೆ''ಯ ಅಪಾರ್ಥವನ್ನು ತನ್ನ ಕೈ ಹಿಡಿದಾಕೆಯೇ ಮಾಡಿಕೊಂಡದ್ದಕ್ಕೆ ಬಹಳ ವ್ಯಸನದ ಮುಖಮುದ್ರೆಯನ್ನು ನಟಿಸಿ ತನ್ನ ಗಲ್ಲಗಳನ್ನು ಪಟಪಟ ಬಡಿದುಕೊಂಡು ತನ್ನಾಕೆಯನ್ನು ಶಾಂತಮಾಡಿದ್ದನ್ನು ಮೀರಾಬೆನ್ ಬಣ್ಣಿಸಿ ಹೇಳಿದಾಗ ನಾನಂತೂ ಹೊಟ್ಟೆ ಹುಣ್ಣಾಗುವಂತೆ ನಕ್ಕಿದ್ದೆನು. ಆಶ್ರಮಕ್ಕೆ ಹಿಂದಿನ ರಾತ್ರಿ ಇವಳು ಬಂದು ಬೆಳಕು ಹರಿಯುವ

ದರೊಳಗಾಗಿ ಮೋತಿಭಾಯಿ' ಹದ್ದು ಎರಗಿದಂತೆ ಹತ್ತು ಬಾರಿ ಎರಗಲೆತ್ನಿಸಿದ್ದನ್ನಂತೂ ಕೇಳಿ ಅನುಭವಿಸಬೇಕು. ಆಶ್ರಮದಲ್ಲಿ ಇದ್ದ ಇಬ್ಬರು ಹೆಣ್ಣಾಳುಗಳು ಸ್ತ್ರೀ ಜಾತಿಯ ಅಭಿಮಾನಿಗಳಿಲ್ಲದಿದ್ದರೆ ಆ ಕಥೆಯೇ ಬೇರೆ ಆಗಬಹುದಿತ್ತು. ಅವರಿಬ್ಬರೂ ಮಹಾಸಾಧ್ವಿನಿಯರಲ್ಲದಿದ್ದರೂ ಮನುಷ್ಯ ಹೃದಯದವರೆಂದು ಮೀರಾಬೆನ್ ಹೇಳಿದ್ದನ್ನು ನಾನೂ ಮನಗಂಡಿದ್ದೇನೆ. ಅವರು ಆಶ್ರಮದ ಎಲ್ಲ ತಂತ್ರಗಳನ್ನೂ ಬಲ್ಲವರು. ಆ ಎಲ್ಲ ತಂತ್ರಗಳ ತಾಯಿಬೇರನ್ನು ಅವರು ಬಲ್ಲರು. ಅವರನ್ನು “ತಡವುವ” ಶಕ್ತಿ ಅಧ್ಯಕ್ಷನಿಂದ ಆಳಿನ ತನಕ ಯಾರಿಗೂ ಇಲ್ಲವೆಂದು ನಮಗೆಲ್ಲ ಗೊತ್ತಾಗಿದೆ. ಅವರಿಂದಲೇ ಆಶ್ರಮದ ಮಕ್ಕಳು ಬದುಕಿ ಉಳಿಯುವದು, ಉಳಿದಿರುವದು. ಅವರು ಮಮತೆಯ ತಾಯಂದಿರಾಗದಿದ್ದರೂ, ಸಿಡುಕಿನ ತಾಯಂದಿರು ಮಾತ್ರ ನಿಜ. ತಾಯ್ತನ ಎಂತಿದ್ದರೂ ತಾಯ್ತನವೇ ಅಲ್ಲವೇ. ಮಕ್ಕಳಿಗೆ ಬೇಕಾದುದು ಇದೇ ತಾಯ್ತನ ಮಮತೆಯ ತಾಯ್ತನ ಪಡೆದು ಬಂದ ಭಾಗ್ಯ. ಸಿಟ್ಟಿನ ತಾಯ್ತನ ಹುಟ್ಟಿ ಪಡೆದ ಭಾಗ್ಯ. ತಾಯ್ತನವಿಲ್ಲದ ಎಲ್ಲ ಭಾವನೆಗಳೂ ಕರುಣಾರಸವಿಲ್ಲದ ಯಂತ್ರದ ಮಿಡಿತಗಳು ಮಾತ್ರ. ಆಶ್ರಮದ ಹುಟ್ಟನ್ನೇ ಅಡಗಿಸಿ ಬಿಡುವಷ್ಟು ಆ ಇಬ್ಬರು ಹೆಣ್ಣುಮಕ್ಕಳು ಆಶ್ರಮದಲ್ಲಿ ಪ್ರಬಲರಿದ್ದಾರೆ. ಅವರು ಒಂದೇ ಹೊಟ್ಟೆಯಲ್ಲಿ ಹುಟ್ಟಿದ ಅಕ್ಕ ತಂಗಿಯರು. ಇಬ್ಬರೂ ಮಹಾರಾಷ್ಟ್ರೀಯರು, ಗಿರಣಿಯ ಕೂಲಿಗೆ ಮಾಳವಣದಿಂದ ಬಂದವರು. ಅವರು ಚೊಕ್ಕವಾಗಿ ಆಶ್ರಮದಲ್ಲಿ ದುಡಿದು ಬದುಕಿಕೊಂಡಿದ್ದಾರೆ. ಅವರಿಗೆ ಯಾರ ಹಂಗೂ ಇಲ್ಲ. ಅವರ ಹೆಸರುಗಳು “ಸೋನಿ” “ಮೋನಿ” (ಸೋಹಿನಿ–ಮೋಹಿನಿ ಇರಬೇಕು). ಅವರು ಅಗಲಿ ಇದ್ದುದನ್ನೇ ನಾನು ನೋಡಿಲ್ಲ. ಅವರಲ್ಲಿ ಒಬ್ಬಳನ್ನೇ ಪ್ರತ್ಯೇಕ ಮಾತನಾಡಿಸುವ ಎದೆಗಾರಿಕೆ ಯಾರಿಗೂ ಇಲ್ಲ. ಒಮ್ಮೆ ಆ ಪ್ರಸಂಗ ನನಗೆ ದೊರೆತಿತ್ತು. ಆಗ ಅವರ ಕಥೆ ನಾನು ಪೂರ್ಣ ತಿಳಿದಿದ್ದೇನೆ. ಮತ್ತೊಮ್ಮೆ ಹೇಳುವೆನು”

———

# (೫)

ಹರಪ್ರಸಾದನು ಇಷ್ಟರಲ್ಲಿ ಆಗಲೇ ದಣಿದಿದ್ದನು. ಸಹಾಯಕ ಬಸ
ವಂತನೂ ಆಗಲೇ ಆಕಳಿಕೆ ಪ್ರಾರಂಭಿಸಿದ್ದನು. ನನಗೂ ಹಸಿವು ಮನೆಯ
ಕಡೆಗೆ ಕರೆಯುತ್ತಿತ್ತು. ನಾನು ಹರಪ್ರಸಾದನ ಕಣ್ಣಿನಲ್ಲಿ ಕಣ್ಣಿಟ್ಟು "ಮನ
ದಣಿ" ನೋಡಿದೆನು. ನಮ್ಮಿಬ್ಬರ ನೋಟಗಳಲ್ಲಿ ಇದ್ದ ತೀಕ್ಷ್ಣತೆ ಮತ್ತು ಏಕಾ
ಗ್ರತೆ ಅನೇಕ ನಿಮಿಷಗಳಾದರೂ ಕದಲಿಲ್ಲ. ಪರಸ್ಪರ ಹೃದಯಗಳ ಪರೀಕ್ಷೆಯೇ
ನಡೆದಿತ್ತು. ಒಬ್ಬರನ್ನೊಬ್ಬರು ಪರಿಣಾಮಕಾರಿಯಾಗಿ ಅರಿತುಕೊಂಡೆವು
ವೆವೋ ಇಲ್ಲವೋ ಎಂಬ ಶೋಧನೆ ಪ್ರಬಲವಾಗಿತ್ತು ಆಗ.

ನಾನು ಕಂಡ ಅನೇಕ ಬಾಲಕರಲ್ಲಿ ಹರಪ್ರಸಾದ ವಿಶಿಷ್ಟ ಸ್ವಭಾವದ
ವನು. ಅವನಲ್ಲಿದ್ದ ಕುಶಾಗ್ರಬುದ್ಧಿ ಪ್ರತಿಯೊಂದು ಪ್ರಸಂಗವನ್ನೂ ಪ್ರತಿ
ಯೊಬ್ಬ ವ್ಯಕ್ತಿಯನ್ನೂ ಬಹಳ ವಿಶ್ಲೇಷಣಾತ್ಮಕವಾಗಿ ಪರೀಕ್ಷಿಸುವ ಮನೋ
ಭೂಮಿಕೆಯನ್ನು ಹೊಂದಿತ್ತು. ಅವನ ವ್ಯಕ್ತಿತ್ವವು ನನ್ನ ಮೇಲೆ ಬಹಳ ಪರಿ
ಣಾಮ ಮಾಡಿದುದೇನೋ ನಿಜ. ನನ್ನ ಪ್ರಾಮಾಣಿಕತೆಯನ್ನು ಈ ಚಿಕ್ಕ
ಬಾಲಕನಿಗೆ ಮನವರಿಕೆ ಮಾಡಿಕೊಡಲು ನನಗೆ ಬೇಕಾದ ಪರಿಸ್ಥಿತಿಯು ನನ್ನ
ಪತ್ರ ವ್ಯವಹಾರದಿಂದ ಇಷ್ಟರಲ್ಲಿಯೇ ನಿರ್ಮಾಣವಾಗಬೇಕಾಗಿತ್ತು. ಆದರೆ
ತಾನೊಂದು ಬಗೆದರೆ ದೈವವೊಂದು ಬಗೆಯುವದು ಎಂಬ ಮಾತಿಗೆ ನಾನು
'ಸೋ' ಅನ್ನುವಂತೆಯೂ ಇಲ್ಲ. ನನ್ನ ಅಂತರಂಗದಲ್ಲಿಯೇ ನಾನು ನಿರ್ಧಾ
ರದ ಮಾತನ್ನೊಂದು ಅಣಿಗೊಳಿಸಿದೆನು. ನಾನು ಈ ಬಾಲಕನ ವಿಷಯದಲ್ಲಿ
ನಿಜವಾಗಿಯೂ ಅಂತಃಕರಣಪೂರ್ವಕವಾಗಿ ದುಡಿದು ಹಿತವನ್ನೇ ಬಯಸಿ
ದ್ದಾದರೆ, ನನಗೆ ಇಂದೇ ಈ ಬಾಲಕನ ತಾಯಿ-ತಂದೆ ಬಂಧುಬಳಗದ ವಿಚಾರ
ವಾಗಿ ಏನಾದರೊಂದು ನಿರ್ಣಯ ದೊರೆಯಲೇಬೇಕು. ಈ ಬಾಲಕ "ಅನಾ
ಥ"ನಲ್ಲ. ಎಂಬ ವಿಚಾರಸರಣಿಗೆ ಅನುಕೂಲವಾದ ಘಟನೆ ಇಂದೇ ಸಂಭವಿಸ
ಬೇಕು. ನಾನು ಡೆಹರಿ-ಓನ್-ಸೋನ್ ಅಧಿಕಾರಿಗಳಿಗೆ ಬರೆದ ಪತ್ರಕ್ಕೆ ಇಷ್ಟ
ರಲ್ಲಿ ಉತ್ತರ ಬರಬೇಕಿತ್ತು. ನಾನು ಕಳಿಸಿದ ಪರಿಪತ್ರವು ಮನವಿಗಿಂತಲೂ
ಹೆಚ್ಚಾಗಿ ಹೃದಯದ ರಸದಿಂದ ತುಂಬಿತ್ತು. ಎಂತಹ ಕಲ್ಲೆದೆಯವನಿದ್ದರೂ

ಬೇರೆ ಎಲ್ಲ ಕಾರ್ಯಗಳನ್ನು ಬದಿಗಿರಿಸಿ ಈ ಬಾಲಕನ ಪ್ರಕರಣ (Case) ವನ್ನು ಎತ್ತಿಕೊಂಡು ಪರಿಶ್ರಮಿಸಿ ಪರಿಶೋಧಿಸಿ ಫಲಿತಾಂಶವನ್ನು ಕಳಿಸಲೇಬೇಕು. ಎಂದು ನನ್ನ ಹೃದಯಮಂಥನದಿಂದ ಪರಿಶುದ್ಧ ಸಾರಸ್ವತ ಅಶರೀರ ವಾಣಿಯು ಉದ್ಭವಿಸಿತು.

ತಟ್ಟನೆ ಎದ್ದು ಇಡೀ ಬ್ರಹ್ಮಸೃಷ್ಟಿಗೇ ಮೊರೆಯಿಡುವಂತೆ "ಊರ್ಧ್ವ ಬಾಹು"ವಾಗಿ ಹೊರಗೆ ಬಯಲಿಗೆ ಹೋಗಿ ನಿಂತು ಅಲ್ಪಾವಧಿಯಲ್ಲಿಯೇ ಮರಳಿ ಬಂದು ಹರಪ್ರಸಾದನ ಭುಜಗಳ ಮೇಲೆ ಕೈಯಿಟ್ಟು ಅವನ ಮುಖ ಮುದ್ರೆಯನ್ನೇ ನಿರೀಕ್ಷಿಸಿದೆನು. ಇವಾವವೂ ನನಗೆ ತಿಳಿಯದಂತೆ ತಾನೇ ತಾನಾಗಿ ನಡೆದ ಘಟನೆಗಳು. ಹೀಗೆಂದು ಸಹಾಯಕ ಬಸವಂತನು ನನಗೆ ಬಹು ದಿನಗಳ ಅನಂತರ ಈ ಪ್ರಸ್ತಾಪ ಬಂದಾಗ ತಿಳಿಸಿದನು.

ಹೊರಗೆ ಬೈಸಿಕಲ್ ಗಂಟೆಯ ನಾದ. ಸಹಾಯಕ ಜಿಗಿದು ಹೊರಗೆ ಹೋದವನು ಅರೆಕ್ಷಣದಲ್ಲಿ "ಎಕ್ಸಪ್ರೆಸ್ ಡೆಲಿವ್ಹರಿ'' ಸರಕಾರಿ ಪತ್ರವೊಂದನ್ನು ಹಿಡಿದುಕೊಂಡು ನನ್ನ ಕೊಠಡಿಯಲ್ಲಿ ನುಗ್ಗಿದನು. ಅವನ ಕಣ್ಣುಗಳಲ್ಲಿ ಆನಂದದ ಸಮುದ್ರವೇ ಉಕ್ಕಿ ಬರುತ್ತಿತ್ತು. ಕೃತಕೃತ್ಯತೆಯ ಹರ್ಷದ ಆವರಣದಲ್ಲಿ ಈ ಪತ್ರವು ಚಿಕ್ಕ ಚಿಕ್ಕೆಯಂತೆ ಮಿನುಗಿತು. ಅದು "ಡೆಹರಿ-ಓನ್-ಸೋನ"ದಿಂದ ಬಂದ ಅಧಿಕಾರಿಗಳ ಪತ್ರ.

ಪತ್ರವನ್ನು ತನ್ನ ತಲೆಯ ಮೇಲಿಟ್ಟುಕೊಂಡು ಸಹಾಯಕ ಬಸವಂತನು "ಗಿಮಿಗಿಮಿ" ತಿರುಗುತ್ತ ನನ್ನ ಕೊಠಡಿಯ ಬದಿಯಲ್ಲಿದ್ದ ವಿಶಾಲ ಸಭಾಗೃಹದಲ್ಲಿ ಕುಣಿದಾಡಿದನು. ಹರಪ್ರಸಾದನು ತೆರೆದ ಬಾಯಿ ಅರಳಿದ ಕಣ್ಣುಗಳಲ್ಲಿ ಆಶ್ಚರ್ಯ ಮರುಕ ಇವುಗಳಿಂದ ತುಂಬಿದ ಆವೇಶವನ್ನು ಉಕ್ಕಿಸುತ್ತಿದ್ದನು.

ನಾವು ಯಾರೂ ಪತ್ರವನ್ನು ಒಡೆದು ನೋಡಿಲ್ಲ. ನನಗೆ "ಎದೆಯಲ್ಲಿ ಎಡೆಯಿಲ್ಲ''. ಈ ಬಸವಂತನಿಗೆ ದೇವರು ಎಲ್ಲಿಲ್ಲದ ಸಂತಸವನ್ನೆಂತು ದಯಪಾಲಿಸಿದನೋ ನಾನರಿಯೆನು. ನಾನು ಸುಮ್ಮನೆ ಕುರ್ಚಿಯಲ್ಲಿ

ಸ್ತಿಮಿತ ಮನದಿಂದ ಕುಳಿತೆನು. ಬಸವಂತನಿಗೆ ಆಗ ವಸ್ತುಸ್ಥಿತಿಯ ಪ್ರಜ್ಞೆ ಬಂದಿತೆನ್ನಬಹುದು. ಮೇಜಿನ ಮೇಲೆ ಪತ್ರವನ್ನಿಟ್ಟು ಅದನ್ನೇ ನೋಡುತ್ತ ನಿಂತನು. ಹರಪ್ರಸಾದನಂತೂ ತನ್ನ ಭವಿತವ್ಯವನ್ನು ಸಾರಿ ಹೇಳುವ ಈ "ಮಾಂತ್ರಿಕ ಮುಚ್ಚೋಲೆ"ಯಲ್ಲಿ ಇಣಿಕಿ ಇಣಿಕಿ ನೋಡುತ್ತಿದ್ದಂತೆ ಕಾಣಿಸಿತು. ನನಗೆ ಮಾತ್ರ ಕೆಲ ಸಮಯದ ಅನಂತರ ಎಂದಿಲ್ಲದ ಸಾಹಸ ಎದೆಯಲ್ಲಿ ನುಗ್ಗಿ ಬಂದಂತೆ ಅನಿಸಿತು. ಆ ಪತ್ರವನ್ನೆತ್ತಿಕೊಂಡು ಮುಖದ ಮೇಲಿದ್ದ ಮುದ್ರಾ ಲಕ್ಷಣಗಳೆಲ್ಲವನ್ನು ಪರೀಕ್ಷಿಸಿ ನೋಡಿದೆನು. ಚಿಕ್ಕ ಕತ್ತರಿಯಿಂದ ಮುಚ್ಚಳವನ್ನೂ ಕತ್ತರಿಸಿ ಓಲೆಯನ್ನು ಬಿಚ್ಚಿದೆ. ಒಂದು ಬಾರಿ ಓದಿದ ನಂತರ ಶಾಂತವಾಗಿ ಉಸಿರೆಳೆದು '' ಸ್ವೀಕೃತ ದಿನಾಂಕ ಮತ್ತು ಕ್ರಮಾಂಕ''ಗಳನ್ನು ಹಾಕಿದೆನು. ಅಧಿಕಾರಿ ಎನ್ನುವ ಅಂಕಿತವೊಂದಿಲ್ಲದಿದ್ದರೆ "ಗಿಮಿಗಿಮಿ ಗಿರಗುಟ್ಟು"ವುದರಲ್ಲಿ ನಾನು ಎಲ್ಲರನ್ನೂ ಮೀರಿಸಬಹುದಿತ್ತೆಂದು ಈಗ ಗಟ್ಟಿಯಾಗಿ ಹೇಳಬಹುದು. ಆಗ ಮಾತ್ರ ಎದ್ದು ನಿಂತು ಸಾಧ್ಯವಿದ್ದ ಎಲ್ಲ ಶಾಂತ ಭಾವನೆಗಳನ್ನು ಕಲೆಹಾಕಿ ಹರಪ್ರಸಾದನಿಗೆ ಮುಗುಳು ನಗೆಯಿಂದ ಒಂದು ವಾಕ್ಯದಲ್ಲಿ ತಿಳಿಸಿದೆನು: "ನಿನ್ನ ತಂದೆಯ ವಿಳಾಸ ದೊರೆತಿದೆ ಹರಪ್ರಸಾದ ಗುರುಧನ ಮುಖರ್ಜಿಯವರೆ !" ಎಂದು. ಹರಪ್ರಸಾದನು ನನ್ನ ಎದೆಗೆ ಬಂದು ತೆಕ್ಕೆ ಬಿದ್ದು ಅಂಟಿಕೊಂಡು ದೀರ್ಘವಾಗಿ ಹೃದಯದ್ರಾವಕವಾಗಿ ಉಮ್ಮಳಿಸಹತ್ತಿದನು. ನನ್ನ ತೋಳ್ಗಳಲ್ಲಿ ಅವನನ್ನು ಬಿಗಿದು ನಾನು ಸಂತೈಸಿದಾಗ ಅವನು ಡಾಕಾ ಮಲ್‌ಮಲ್‌ನಂತೆ ಅತಿ ಮೃದುವಾಗಿ ಅಂಟಿಕೊಂಡನು. ಸಹಾಯಕ ಬಸವಂತ ಇಂತಹ ಎಷ್ಟೋ ಮಾರ್ಮಿಕ ಪ್ರಸಂಗಗಳನ್ನು ಕಂಡಿದ್ದರೂ ಇಂದು ಮಾತ್ರ ನನ್ನ ಕೊಠಡಿಯಲ್ಲಿ ನಿಲ್ಲುವ ಕಾಠಿಣ್ಯತೆಯನ್ನು ಪಡೆಯಲಿಲ್ಲ. ಹೊರಗೆ ಹೋಗಿ ಎಷ್ಟೋ ಹೊತ್ತಿನ ಅನಂತರ ಬಂದು ಹರಪ್ರಸಾದನನ್ನು ಕರೆದುಕೊಂಡನು.

ನನಗೆ ಈ ಎಲ್ಲ ಕರುಣೆಯ ಸನ್ನಿವೇಶಕ್ಕಿಂತಲೂ ಹೆಚ್ಚಾಗಿ ಈ ಹರಪ್ರಸಾದನ ಹೃದಯ ಕೋಮಲತೆ ಆಶ್ಚರ್ಯವನ್ನುಂಟು ಮಾಡಿತು. ಜಗತ್ತಿನ ಅನೇಕ ವ್ಯಾಪಾರ-ಅವ್ಯಾಪಾರಗಳನ್ನು ವಿಸ್ಮಯಕಾರಕವಾದ ನಿರ್ಲಿಪ್ತ ಮನಸ್ಸಿನಿಂದ, ಕಂಡು ತಿಳಿದು ಅನುಭವಿಸಿ, ನಮಗೆ ಕಥನ

ಮಾಡಿದ ಈ "ಪ್ರಬುದ್ಧ" ಬಾಲಕ, ತನ್ನ ಹೃದಯದ ಒಂದು ಪವಿತ್ರ ಭಾಗದಲ್ಲಿ ತನ್ನ ಭವಿತವ್ಯದ ಬಗೆಗೆ ಇರಿಸಿಕೊಂಡಿರುವ ತೀವ್ರ ಅಭಿಲಾಷೆ ಯನ್ನು ಇಂದು ನನ್ನೆದುರು ಮೂಕಭಾವದಿಂದ ವ್ಯಕ್ತಪಡಿಸಿದನು. ಈ ಕೋಮಲ ಬಾಲಕ ಅದೆಷ್ಟು ತನ್ನ ಅಂತರಾಳದಲ್ಲಿ ನೊಂದು ಬೆಂದಿರಬೇಕು. ಇನ್ನೂ ಆಗಾಗ ಏಳುತ್ತಿದ್ದ ದುಃಖದ ಬಿಕ್ಕುಗಳು ಹರಪ್ರಸಾದನ ನಾಲಿಗೆಗೆ ಅವಕಾಶ ಕೊಡುತ್ತಿದ್ದಿಲ್ಲ. ತುಟಿಗಳನ್ನು ಬಿಗಿ ಹಿಡಿದ ಉಮ್ಮಳವನ್ನು ಕೊಸರಿ ಅವು ಏನನ್ನೋ ನುಡಿಯಲು ಅದುರುತ್ತಿದ್ದವು. ಆದರೆ ಆ ಕಂಪನ ಗಳು ಕೇವಲ ಆ ಬಾಲಕನ ಇಡೀ ಮುಖಮುದ್ರೆಯನ್ನೇ ಭಾರಗೊಳಿಸಿದ್ದವು. ಇದನ್ನು ಸಹಿಸದಾದೆನು. ನಾನು ಅಧಿಕಾರಿಯಾಗಿ ಬಸವಂತನಿಗೆ ತಿಳಿಸಿದೆನು. 'ಹರಪ್ರಸಾದನ ಮುಖ ತೊಳೆಯಿಸಿ ಉಣಿಸಿ ಒಂದೆಡೆ ಅವನಿಗೆ ವಿಶ್ರಾಂತಿಯ ವ್ಯವಸ್ಥೆ ಮಾಡಿಕೊಡು. ನಾಳೆ ಮುಂಜಾನೆ ಅವನೊಡನೆ ಮಾತನಾಡುವೆನು' ಎಂದು.

[೬]

ಆ ದಿನ ನಾನು ಮನೆಗೆ ಹೋದುದು ಗೊತ್ತಿಲ್ಲ. ಊಟ ಮಾಡಿದ್ದೇನೆಂಬುದು ನೆನಪಿಲ್ಲ. ಮನೆಮಂದಿಯ ಜೊತೆಗೆ ಹೇಗೆ ಮಾತನಾಡಿದೆ ಎಂಬುದು ಅರಿವಿಲ್ಲ. ಆ ದಿನ ನಾನು ಮನೆಗೆ ಹೋಗಿ ಊಟ ಮಾಡಿ ಮಲಗಿದ್ದು ಮನೆಯೊಳಗಿನ ಒಂದು ಆರಾಮು ಆಸನದಲ್ಲಿ. ಮನೆಯವರು ನನ್ನ ಮೇಲೊಂದು ಹೊದಿಕೆಯನ್ನು ಹಾಕಿ ನನ್ನನ್ನು ಅಲ್ಲಿಯೇ ಎಬ್ಬಿಸದೇ ಬಿಟ್ಟಿದ್ದರು. ನನ್ನ ಜೀವನದಲ್ಲಿ ಇಂಥ ಪ್ರಸಂಗಗಳು ಆಗಾಗ ಬರುವದು ಮನೆಯವರೆಲ್ಲರಿಗೆ ಅನುಭವದ ಮಾತು. ಯಾರೂ ಆಗ ನನ್ನನ್ನು "ತಡವುವಂತಿಲ್ಲ"

ಒಮ್ಮೆ ಒಂದು ಘಟನೆ ನಡೆದು ಇಂದಿಗೂ ಈ ಪರಿಪಾಠಕ್ಕೆ ಹಾದಿ ಹಾಕಿ ಕೊಟ್ಟಿದೆ. ನನ್ನ ಜೀವನದಲ್ಲಿ ನಡೆದ ಬಹಳ ಸೂಕ್ಷ್ಮ—ಅಷ್ಟೇ

ಪರಿಶ್ರಮದ—ಕಾರ್ಯವನ್ನು ಅಂದು ಮುಗಿಸಿ ಮನೆ ಮುಟ್ಟಿದಾಗ ನಾ
“ಆಳಾಗಿರಲಿಲ್ಲ”ವೆಂದು ನಮ್ಮವರು ಇಂದಿಗೂ ಹೇಳಿ ನನಗೆ ಆ
ಎಚ್ಚರಿಸುತ್ತಾರೆ. ಜೀವನದಲ್ಲಿ ಮನುಷ್ಯನ ಸತ್ವಪರೀಕ್ಷೆಯನ್ನು ಮಾಡು
ಪ್ರಸಂಗಗಳು ಸ್ವತಃ ಅವು ಸತ್ವಶಾಲಿಯಾಗಿರುತ್ತವೆ. ಜೊಳ್ಳು ಜರಗುಗ
ಜೀವನದಲ್ಲಿ ಯಾವಾಗಲೂ ಮನುಷ್ಯನಿಗೆ ಎದುರು ಬರುತ್ತವೆ. ಜೀವನ
ಶಾಂತಿಯನ್ನು ಪಡೆಯಬಯಸುವ ಮನುಷ್ಯನು ಎಂದಿಗೂ ಇಂಥ ಜೊ
ಜರಗುಗಳಿಗೆ ಮಹತ್ವ ಕೊಟ್ಟು ತನ್ನ ಕಾಲಹರಣವನ್ನು ಮಾಡಿಕೊಳ್ಳು
ದಿಲ್ಲ. ಅವುಗಳಿಗೆ ಕೊಡಬೇಕಾಗುವಷ್ಟು ಲಕ್ಷ್ಯಕೊಟ್ಟು ಅವುಗಳ
ತೇಲಿಸಿಬಿಡುವನು. ಅಪವ್ಯಯ ಇಂದಿನ ದರಿದ್ರರ ಲಕ್ಷಣ. ದಾರಿದ್
ಎರಡು ರೀತಿಯಿಂದ ಒಬ್ಬನನ್ನು ಬೆನ್ನು ಹತ್ತುವದು. ಒಂದು ಇನ್ನೊಬ್ಬ
ನಮ್ಮ ಮೇಲೆ ಬಲಾತ್ಕಾರದಿಂದ ಹೇರಿದುದು. ಇದು ಪಾಶವೀಯ. ಇದ
ಎದುರಿಸುವ ಸಾಮರ್ಥ್ಯ ನಮ್ಮಲ್ಲಿಲ್ಲದಾಗ ನಾವು ಈ ದಾರಿದ್ರ್ಯ
ಒಳಗಾಗುತ್ತೇವೆ. ಇದಕ್ಕೆ ನಾವು ಹೆಚ್ಚು ಹೊಣೆಗಾರರಲ್ಲ. ಇಂತ
ದಾರಿದ್ರ್ಯ ನಿರ್ಮೂಲನೆಯಾಗುವದು ಸಾಮೂಹಿಕ ಜಾಗೃತಿ ಮತ್ತು
ಆಂದೋಲನದಿಂದ. ಎರಡನೆಯದು, ನಾವು ಮೇಲೆ ಹೇಳಿದ ಜೊಳ್ಳು
ಜರಗುಗಳನ್ನು ಜೀವನದಲ್ಲಿ ಬಹಳ ಬೆಂಬತ್ತಿ, ಮಹತ್ವದ ಸತ್ವಶಾಲಿಯಾದ
ಅವಕಾಶಗಳನ್ನು ಕಳೆದುಕೊಂಡು, ಈ ಅಪವ್ಯಯ ಈ ದುಂದುಗಾರಿಕೆಯಿಂ
ದರಿದ್ರರಾಗುತ್ತೇವೆ. ಈ ದಾರಿದ್ರ್ಯದಿಂದ ಮುಕ್ತಿ ದೊರೆಯುವದು ನಾವು
ಕಣ್ತೆರೆದು ಸತ್ಯವೂ ಭದ್ರವೂ ಆದುದನ್ನು ನಮಗಾಗಿ ಗಳಿಸಿಕೊಂಡಾಗಲೇ
ಯಾರೂ ಈ ಸೌಭಾಗ್ಯವನ್ನು ನಮಗಾಗಿ ಬೆರಳಿಟ್ಟು ಗುರುತಿಸಿ ತೋರಿಸ
ಬೇಕಾಗಿಲ್ಲ. ಮನುಷ್ಯ—ಸಹಜ ಬುದ್ಧಿಯ ಬೆಳಕಿನಲ್ಲಿ ಇದನ್ನು ನಾವೇ
ಗುರುತಿಸಿಕೊಳ್ಳಬಹುದು. ಪ್ರಯತ್ನ ಮಾತ್ರ ಅವಶ್ಯ. ನಿರಾಯಾಸ
ವಾದುದು ನಮಗೆ ಪ್ರಥಮ ಹಂತದಲ್ಲಿಯೆ ಎಂದಿಗೂ ದೊರೆಯುವದಿಲ್ಲ.
ನಿರಾಯಾಸ ಸಿದ್ಧಿಯು ಸಾಧನೆಯ ಹಲವು ಹಂತಗಳ ಆಚೆಗಿನ ಕ್ರಿಯಾಘಟ್ಟ.
ಇನ್ನೊಬ್ಬರು ಮಾಡುವದನ್ನು ನಾವು ಅನುಕರಿಸುವದು ಆತ್ಮವಂಚನೆ. ಅವರ
ಪ್ರಬುದ್ಧ ಮಟ್ಟವನ್ನು ಮುಟ್ಟುವ ಹಂಬಲವು ಸಕಾಲಿಕವೂ ಕ್ರಮಬದ್ಧವೂ
ತಾಳ್ಮೆಯಿಂದ ಕೂಡಿದುದೂ ಆದರೆ ಮಾತ್ರ ಇನ್ನೊಬ್ಬರ ಉದಾಹರಣೆ ಕೇವಲ

ಕಾಲಹರಣವಾಗುವದಿಲ್ಲ. ಸಜೀವ ಸಾಕಲ್ಯಯೋಗವಾಗುವದು. ಆಗ ನಮಗೆ ಎಡನೆಯ ರೀತಿಯ (ನಾವೇ ತಂದುಕೊಳ್ಳುವ) ದಾರಿದ್ರ್ಯದ ತೊಂದರೆಯಿಲ್ಲ. ಎರಡನೆಯ ರೀತಿಯ ಈ ಸ್ವಯಮಾರ್ಜಿತ ದಾರಿದ್ರ್ಯ ಇಂದಿನ ಯುಗದಲ್ಲಿ ಒಂದು ಮಹಾಪರಾಧ.

ನಾನು ಸಂಪೂರ್ಣ ನನ್ನದೆಲ್ಲವನ್ನು ಮೇಲೆ ಹೇಳಿದ ಇಂಥ ಸತ್ವಯುತ ಪ್ರಸಂಗಗಳಲ್ಲಿ ಕೇಂದ್ರೀಕರಿಸಿದಾಗ, ಆಗ ಕೇವಲ ನಾನು ಆ "ಸತ್ವದ" ಚಲನ ವಲನಗಳಲ್ಲಿ ಜೀವಿಸಿರುತ್ತೇನೆ. ಆ "ಸತ್ವ"ವು ಇನ್ನೂ ತನ್ನ ಕ್ರಿಯೆಯಲ್ಲಿ ಒಂದು ಪೂರ್ಣಾವಸ್ಥೆಗೆ ಮುಟ್ಟಲು ಅವಕಾಶವಿರುವಾಗ ಯಾಂತ್ರಿಕವಾಗಿ ನಾನು ನನ್ನ ನಿತ್ಯದ ಗೃಹಕೃತ್ಯಗಳನ್ನು ಮುಗಿಸುತ್ತಿರುತ್ತೇನೆ. ಈ ಯಾಂತ್ರಿಕವು ಕ್ರಮತಪ್ಪಿ, ಈ ಯಾಂತ್ರಿಕಾವಸ್ಥೆ ಮತ್ತು ಜೀವನಾವಸ್ಥೆ ಇವುಗಳ ಮಧ್ಯಂತರದ ವಿರಾಮದ ಅವಧಿಯಲ್ಲಿ ಮನಶ್ಶಾಂತಿಯನ್ನು ಭಂಗ ಗೊಳಿಸಿದರೆ ನಾನು ದೈಹಿಕವಾಗಿ ವಿಪರೀತ ಅಸ್ವಾಸ್ಥ್ಯಕ್ಕೆ ಈಡಾಗುವೆನು. ಅಂತಃಶಕ್ತಿಯ ಈ ವ್ಯಾಪಾರಕ್ಕೆ ನಾನು ಕಾರಣವನ್ನು ಹುಡುಕಲು ಹೋಗಿಲ್ಲ. ಇಂತಹ ವಿಚಾರಗಳಲ್ಲಿ ತಜ್ಞರಾದವರು ಇದು ಅಸಹಜವೆಂದು ಎಂದೂ ಅನ್ನ ಲಾರರೆಂದು ನನಗೆ ಆತ್ಮ ಭರವಸೆ ಇದೆ.

ನಾನು ಮರುದಿನ ಎಚ್ಚತ್ತಾಗ ಹೊಸ ಮನುಷ್ಯನಾಗಿದ್ದೆ. ನಾನು ಆಫೀಸಿಗೆ ಹೋದಾಗ ನನ್ನ ಮನೋಭೂಮಿಯ ಮೇಲೆ ಹೊಂಬಿಸಿಲಿನ ಹೂಗಳು ಅರಳಿದ್ದವು. ನನ್ನ ಹಿಂದಿನ ದಿನದ ಗಾಢತೆಗೆ ನಾನು ನಿತ್ಯ ಸೃಷ್ಟಿಯ ಗರ್ಭಧಾರಣೆಯ ಅಂಶವೆಂದು ನಾಮಕರಣ ಮಾಡಿಕೊಂಡಿದ್ದೇನೆ. ಸೃಷ್ಟಿಯು ನಿತ್ಯ ನವೀನೆಯೆಂದು ಕವಿ ರವೀಂದ್ರರು ಬಾರಿ ಬಾರಿಗೆ ಬಣ್ಣಿಸಿ-ದ್ದಾರೆ. ತಮಸ್ವಿನಿ ತಪಸ್ವಿನಿ. ಬೆಳಕು ಹೆಪ್ಪುಕಟ್ಟೆ ಕತ್ತಲು. ಕತ್ತಲು ಬೆಳಕಿನ ಸಮಾಧಿಯ ಸ್ಥಿತಿ. ಕತ್ತಲಿನ ಮಂಥನದಿಂದಲೇ ಬೆಳಕಿನ ಅಮೃತೋದಯವಾಗುವದು. ಈ ವರ್ತುಲ ವ್ಯಾಪಾರದ ಪರಿಪೂರ್ಣ ಪರಿಚಯದಿಂದಲೇ ಸ್ಥಿತಪ್ರಜ್ಞಾವಸ್ಥೆಗೆ ಮನುಷ್ಯ ಮುಟ್ಟುವದು. ಈ ಅವಸ್ಥೆ ಯಲ್ಲಿ ನಿಂತು, ಯಾವದೊಂದು ಕಾರ್ಯವನ್ನು ನೀವು ಎತ್ತಿಕೊಂಡು ಮಾಡಿದರೂ ಅದು ಪರಮೇಶ್ವರನ ಕೃಪೆಗೆ ಪಾತ್ರವಾಗುವದು. ಆ ಕಾರ್ಯ

ಆಗ ಯೋಗ್ಯ ಗುರಿಯನ್ನೇ ಯೋಗ್ಯ ಹಾದಿಯನ್ನೇ ಹಿಡಿದು ಸಕಾಲಿಕವಾಗಿ ಹರ್ಷದಾಯಕವಾಗಿ ಮುಕ್ತಾಯವಾಗುವದು. ಇದು ನನಗೆ ಚಿಕ್ಕಂದಿನಿಂದಲೇ ಹಿರಿಯರಿಂದಲೂ ಗುರುಗಳಿಂದಲೂ ಅಭ್ಯಾಸ ಬಲದಿಂದಲೂ ಜೀವನಸಕ್ತ ಮದಲ್ಲಿ ಪರಿಪಾಠವಾಗಿದೆ !

ನನ್ನ ಕೊಠಡಿಗೆ ಹರಪ್ರಸಾದನೊಂದಿಗೆ ಸಹಾಯಕ ಬಸವಂತನು ಬಂದು ನಿನ್ನೆ ನಾನು ಮನೆಗೆ ಹೋದ ಅನಂತರ ಬಂದ (Strictly pers-onal) ಎಂಬ "ಅತಿ ವ್ಯಕ್ತಿ ಸಂಬಂಧ" ಪತ್ರವೊಂದನ್ನು ನನ್ನೆದುರಿಗೆ ಇಟ್ಟನು. ಅದು ಸಂಜೆ ಏಳರ ಸಮಯಕ್ಕೆ ಅತಿ ಅವಸರ (Express) ದಿಂದ ಬಂದದ್ದು. ಮನೆಗೆ ಆತ ಮುಟ್ಟಿಸಲು ಬಂದಾಗ ಎಲ್ಲರೂ ಅವನಿಗೆ ಎಚ್ಚರ ಹೇಳಿ ಕಳಿಸಿದ್ದರು. ಆಫೀಸಿನ ಗಡಿಬಿಡಿ ಮನೆಯಲ್ಲೇಕೆ ಎಂದು ಹಿರಿಯರು ಆ ಪತ್ರವನ್ನು ಬಸವನೊಂದಿಗೆ ಮರಳಿ ಕಳಿಸಿದ್ದರು. ತಾನು ನಿರುಪಾಯನಾಗಿ ಈಗ ಮುಟ್ಟಿಸುತ್ತಿದ್ದೇನೆಂದು ತಿಳಿಸಿದ ಬಸವಂತ. ಅಭ್ಯಂತರವೇನೂ ಇಲ್ಲ. ನಿನ್ನ ಕರ್ತವ್ಯವನ್ನು ನೀನು ಪಾಲಿಸಿರುವಿ. ನಿನಗೇಕೆ ಭಯ. ಎಂದು ಅಭಯವನ್ನು ಹೇಳಿದೆ. ಪತ್ರವನ್ನು ಬಿಚ್ಚಿದೆನು.

ಪೋಲೀಸ ಅಧಿಕಾರಿಗಳು ಕೆಲವು ಜಾಗ್ರತೆಯ ಸೂಚನೆಗಳನ್ನು ನಾನು ಸ್ವತಃ ಮಾರ್ಗದರ್ಶನ ಪಡೆಯಲೆಂದು ಕಳಿಸಿದ್ದರು. ಈ ಸೂಚನೆಗಳನ್ನು ಅವರು ಒಬ್ಬ ಮಿತ್ರನಾಗಿ (ಅಧಿಕಾರಿಯಾಗಿ ಅಲ್ಲ) ನನಗೆ ಕಳಿಸಿದ್ದರು ನಾನು ಇನ್ನು ಮುಂದೆ ಹರಪ್ರಸಾದನ ಮನೆಯವರೊಂದಿಗೆ ಹರಪ್ರಸಾದನ ಪ್ರಕರಣ ದಲ್ಲಿ ಹೇಗೆ ನಡೆದುಕೊಳ್ಳಬೇಕು. ನಾನು ನೇರ ಸಂಪರ್ಕ ಪಡೆದುಕೊಳ್ಳಲು ಬಯಸಿದರೆ ಈ ವಿಷಯವನ್ನು ಅವರೆದುರು ಹೇಗೆ ಪ್ರಸ್ತಾಪಿಸಬೇಕು. ಹರಪ್ರಸಾದನಿಗೆ ತನ್ನವರ ಈಗಿನ ಪರಿಸ್ಥಿತಿಗಳನ್ನು ಅಂಶತಃ ಯಾವುಗಳನ್ನು ಪ್ರಾಶಸ್ತ್ಯ ಕೊಟ್ಟು ಹೇಳಬೇಕು ಯಾವುಗಳನ್ನು ಅವನು ತನ್ನ ಹುಟ್ಟೂರು ಮುಟ್ಟುವ ತನಕ ತಿಳಿಸಬಾರದು. ಇವೇ ಮೊದಲಾದ ಬಹಳ ಸಹಕಾರಿ ಯಾದ ಉಪಯುಕ್ತ ಸೂಚನೆಗಳನ್ನು ಅವರು ಕಳಿಸಿದ್ದರು. ನನ್ನ ಬೆರಳುಗಳು ಲೆಕ್ಕಣಿಕೆಗಾಗಿ ತವಕಿಸುತ್ತಿದ್ದವು. ಕೃತಜ್ಞತೆಯ ಮಹಾಪೂರದಲ್ಲಿ ನಾನು ಮುಳುಗಿ ಏಳುತ್ತಿದ್ದೆನು. ನನ್ನ ಹೃದಯದ ಮಾತುಗಳ ಹುಟ್ಟಿ ಹಾಕಿ

ನನ್ನ ಪತ್ರ ನಾವಿಕೆಯಲ್ಲಿ ಕುಳಿತು ನಾನು ದಂಡೆಗೆ ಹತ್ತಿದೆನು. ನಾನು ಕೇವಲ ಹತ್ತು ಮಾತುಗಳಲ್ಲಿ ಆ ಪತ್ರವನ್ನು ಮುಗಿಸಿದ್ದೆನು. ಆದರೆ ಈ ಹತ್ತು ಮಾತುಗಳು—ಹಗಲು ರಾತ್ರಿ ತಿದ್ದಿ ತೀಡಿ ಬರೆದವುಗಳು ಎಂದಿಗೂ ಇವುಗಳ ಪೂರ್ಣಾವಸ್ಥೆಯನ್ನು ತಲುಪದಂತಹವು. ಆ ಅಧಿಕಾರಿಗಳು ನನ್ನನ್ನು ಹರಪ್ರಸಾದನನ್ನು ಕೂಡಿಯೇ ಬದುಕಿಸಿದ್ದಾರೆ ಎಂದುದೇ ಆ ಪತ್ರದ ತಾತ್ಪರ್ಯವಾಗಿತ್ತು.

## (೭)

ಆ ಪತ್ರವನ್ನು ಅಂಚೆಗೆ ಕಳಿಸಿದ್ದೇ ಅಂದು ನನ್ನ ಮೊದಲಿನ ಕಾರ್ಯವಾಯಿತು. ಅಂಚೆಯಿಂದ ಬಸವಂತ ಬರುವ ತನಕ ಹರಪ್ರಸಾದನ ನಿನ್ನೆಯ ಇಂದಿನ, ಊಟ–ಉಡಿಗೆ, ನಿದ್ರೆ, ಸ್ನಾನ, ಅಭ್ಯಾಸ, ಪ್ರಾರ್ಥನೆ, ಸಾಮೂಹಿಕ ಕಾರ್ಯಕ್ರಮ ಇವುಗಳ ವಿಷಯವಾಗಿ ಕೇಳಿ ತಿಳಿದುಕೊಂಡೆನು. ಅವನು ಕೊಟ್ಟ ಉತ್ತರ ಶುದ್ಧ ಬಂಗಾರದ ಒಲೆಯಿತ್ತು. ಅವನಿಂದು ಬೆಳಕಿನ ಚೊಚ್ಚಲ ಮಗನಾಗಿದ್ದಾನೆ. ಬೆಳಕಿನ ಚಕ್ರವ್ಯೂಹದಲ್ಲಿ ಅವನು ಸಿಕ್ಕಿಲ್ಲ. ಬೆಳಕಿನ ವರ್ತುಲಗಳು ಅವನಿಂದಲೇ ಹುಟ್ಟಿ ಅವನ ಸುತ್ತು ತಿರುಗಿ ಅವನಲ್ಲಿಯೇ ಒಂದಾಗುತ್ತವೆ. ಪುನಃ ಅವನು ಬೆಳಕಿನ ಮಧ್ಯ ಬಿಂದು. ನಾನು ಈ ಮಾತು ಬರೆಯುವಾಗ ಅತಿಮಾನುಷರನ್ನು ಸುತ್ತುಗಟ್ಟುವ ದಿವ್ಯತೇಜೋಮಂಡಲದ ನೆನಪಿಟ್ಟುಕೊಂಡು ಹೇಳುತ್ತಿರುವದಿಲ್ಲ. ಇದು ನಿಜ ಸಂಗತಿ, ಕಣ್ಣಾರೆ ಕಂಡ ಅನುಭವಿಸಿದ ವಾಸ್ತವಾಂಶ. ಉತ್ಪ್ರೇಕ್ಷೆಗೆ ಎಂದಿಗೂ ನಾನು ಅವಕಾಶ ಕೊಡುವದಿಲ್ಲ. ಸಾಧುಸಂತರ ದಿವ್ಯ ತೇಜಸ್ಸನ್ನು ಅವರ ಸುತ್ತು ನಾನು ಅವರನ್ನು ನೋಡಿದಾಗಲೆಲ್ಲ ಕಂಡಿದ್ದೇನೆ. ಆದರೆ ಹರಪ್ರಸಾದನ ಇಂದಿನ "ಹಸುಮಗನ ದಿವ್ಯತೆ"ಯನ್ನು ಮಾತ್ರ ನಾನು ಇಂದೇ ಪರಿಪೂರ್ಣ ಅವಸ್ಥೆಯಲ್ಲಿ ಕಾಣುತ್ತಿದ್ದೇನೆ. ಹರಪ್ರಸಾದನ ಪ್ರಕರಣವನ್ನು ನಾನು ಕೈ ಹಚ್ಚಿ ಮುಗಿಸುತ್ತಿದ್ದೇನೆ ಎಂಬ

ಒಣ ಹವ್ಯಾಸದಿಂದ ಈ ಮಾತುಗಳನ್ನು ಬೆಳೆಸಿ ಬರೆದಿಲ್ಲ. ಈ ದಿವ್ಯತೆ ಉಳ್ಳ ಯಾವುದೇ ಒಬ್ಬ ಮನುಷ್ಯನಿಗೆ ತನ್ನ ಜೀವನದಲ್ಲಿ ಕಂಡು ಬಂದರೆ ಅವನ ಭಾಗ್ಯಕ್ಕೆ ಎಣೆಯಿಲ್ಲವೆಂದೇ ನನ್ನ ಭಾವನೆ. ಹರಪ್ರಸಾದನ ಅಂತಃಕರಣದ ಈ ಉಕ್ಕುವಿಕೆಯನ್ನು ಅಧಿಕಾರದ ಶುಷ್ಕಮಾತುಗಳಿಂದ ತಡೆಗಟ್ಟಲಿಲ್ಲ. ಅದಕ್ಕೆ ಅಸಹಜವಾದ ಪುರಸ್ಕಾರವನ್ನು ನೀಡಲಿಲ್ಲ. ನಾನು ಪಡೆದ ಯಶಸ್ಸಿನ ಕೊಂಬು ಕಹಳೆಗಳನ್ನು ಅವನೆದುರು ನಾನೇ ಊದಿಯಾಗಲೀ, ಬಸವಂತ ಅಥವಾ ಹರಪ್ರಸಾದ ಇವರು ಊದುವಂತೆ ಮಾಡಿಯಾಗಲೀ ನಾನು ಈ ಸುಂದರ ಸಹಜ ವಾಸ್ತವದ ವಿಕಾಸಕ್ಕೆ ಭಂಗತರಲಿಲ್ಲ. ಈ ಸಿದ್ಧಿಯ ಯಶಸ್ಸು ಹಲವರ ಹಸನಾದ ಕೃತಿಗಳ ಯಶಸ್ಸು- ಜೀವನವೇ ಒಟ್ಟಾರೆ ಬೆನ್ನು ಚಪ್ಪರಿಸಿಕೊಳ್ಳುವ ಕೃತಿಪುತೆಯಲ್ಲಿಲ್ಲ. ಹಸನಾಗಿ ದುಡಿದು ದೈವತದ ಅಡಿಯಲ್ಲಿ ಒಪ್ಪಿಸಿ, ಬದಿಗೆ ಸರಿದು ಕ್ಷಣಹೊತ್ತು ನಮ್ರವಾಗಿ ನಿಂತು ಮುಂದಿನ ಕರ್ತವ್ಯಕ್ಕಾಗಿ ಕಾಯ್ದು ಅದನ್ನು ಬರಮಾಡಿಕೊಳ್ಳುವದೇ ಜೀವನ. ಆಗ "ಪಾಲಿಗೆ ಬಂದುದು ಪಂಚಾಮೃತ"ವಾಗುವದು. ಬಸವಂತನು ಲೌಕಿಕ ದೈನಂದಿನ ಪಂಚಾಮೃತಗಳಲ್ಲೊಂದಾದ ಎಲೆ ಅಡಿಕೆಯನ್ನು ಅಗಿದು ಹೊರಗೇ ಉಗುಳಿ ರಂಗು ರಂಗಾಗಿ ಕೊಠಡಿಗೆ ಬಂದನು. ಬಹುಶಃ ಅವನು ತನ್ನ ಹರ್ಷದ ಸುದ್ದಿಯನ್ನು ಇನ್ನೊಬ್ಬರಿಗೆ ತಿಳಿಸಲು, ತನ್ನ ಕಿಸೆಯಿಂದ ಹಣ ವೆಚ್ಚ ಮಾಡಿ, ಅವರೊಂದಿಗೆ ಉಪಹಾರ ಮಂದಿರವನ್ನು ಹೊಕ್ಕು ಬಂದಂತೆ ಕಂಡಿತು ! ಈ ವಿಷಯ ನಾವು ನಮ್ಮಷ್ಟಕ್ಕೆ ಅರಿತು ನಮ್ಮಲ್ಲಿಯೇ ಅಡಗಿಸಿ ಬಿಡಬೇಕಾದಂತಹವು. ಪ್ರಶ್ನೆಮಾಡಿ ಕೇಳಿದರೆ ಹುರುಳಿಲ್ಲ. ಬಸವಂತನಿಗೂ ಮಾನವ ಸಹಜ ಭಾವನೆಗಳಿವೆ. ಅವುಗಳ ಏರಿಳಿತಕ್ಕೆ ಅವನೂ ಬಾಧ್ಯಸ್ಥನು ಎಂದೇ ನಾನು ಅವನು ಬಂದೊಡನೆಯೇ ನಿತ್ಯದ ಕಾರ್ಯಗಳಿಗೆ ತೊಡಗಿಸಿದೆನು. ಹರಪ್ರಸಾದನು ಮಾತ್ರ ಬಸವಂತನ ಹರ್ಷವನ್ನು ಕಂಡು ಮುಗುಳು ನಗೆ ನಗುವದು ಕಂಡು ಬಂದಿತು. ಹರಪ್ರಸಾದನ ಕಣ್ಣುಗಳು ಬಸವಂತನ ಚಲನ ವಲನಗಳನ್ನು ನಿರೀಕ್ಷಿಸುತ್ತ ತನ್ಮಯವಾಗಿದ್ದವು. ನಾನು ಬಸವಂತನಿಗೆ ಹರಪ್ರಸಾದನ ಪ್ರಕರಣದ ಕಾಗದ ಪತ್ರಗಳನ್ನು ಕಪಾಟನಿಂದ ತೆಗೆದು ನನ್ನೆದುರು ಇಡಲು ಹೇಳಿದಾಗ ಇಬ್ಬರೂ ತಾವು ಈ ಜಗತ್ತಿನ ವ್ಯಾಪಾರಗಳಿಗೆ ಬಾಧ್ಯಸ್ಥರೆಂಬುದನ್ನು ಅರಿತರು. ಕಾಗದ ಪತ್ರಗಳು ನನ್ನೆದುರಿಗೆ ಬಂದವು.

ಅವರಿಬ್ಬರಿಗೂ ಕುಳಿತುಕೊಳ್ಳಲು ಹೇಳಿ ನಾನೂ ನನ್ನ ಮೇಜಿಗೆ ಹೋದೆನು. ಆವರಿಬ್ಬರ ಹೃದಯಗಳು ನನ್ನ ಮೇಜಿನ ಮೇಲೆ ಕಾಗದ ಪತ್ರಗಳಲ್ಲಿ ಬಂದು ಕುಳಿತಂತೆ, ಅವರು ಮೈಯೆಲ್ಲಾ ಕಣ್ಣಾಗಿ ಕಾಗದ ಪತ್ರಗಳನ್ನು ನೋಡುತ್ತ ಕುಳಿತರು. ಹರಪ್ರಸಾದನ ಮುಂದಿನ ಕಾರ್ಯಕ್ರಮವನ್ನು ನಾನು ಹೊಂದಿಸುವಲ್ಲಿ ಮಗ್ನನಾಗಿ ಬಿಟ್ಟೆನು.

ಹರಪ್ರಸಾದ ಮತ್ತು ಸಹಾಯಕ ಬಸವಂತರು ನನ್ನ ಬದಿಗೆ ಇದ್ದಗೂ ಯಾವ ವಿಧದಿಂಪಲೂ ನಾನು ಅವರ ಉಪಯೋಗ ತೆಗೆದುಕೊಳ್ಳಲಿಲ್ಲ. ನನ್ನೆದುರು ಇದ್ದ ಕಾಗದ ಪತ್ರಗಳು ನನ್ನ ದೈನಂದಿನ ಚುಟುಕು ಟಿಪ್ಪಣೆಗಳು ಎಲ್ಲವೂ ತಮ್ಮ ಪರವಾಗಿ ಸಮರ್ಥವಾಗಿ ಮಾತನಾಡುತ್ತಿದ್ದವು. ನಾನು ಹರಪ್ರಸಾದನ ಪ್ರಕರಣವನ್ನು ಮಕ್ಕಳ ನ್ಯಾಯಾಲಯದ ನಿರ್ಣಾಯಕ ರೆದುರು ಹೇಗೆ ಇಡಬೇಕೆಂಬುದನ್ನು ಆ ಪ್ರಕರಣದ ಇತಿಹಾಸವು ಕ್ರಮಬದ್ಧ ವಾಗಿ ಸತ್ಯಬದ್ಧವಾಗಿ ಬೆಳೆದು ಬಂದುದರಿಂದ ತಾನೇ ತನಗೆ ಮಾರ್ಗದರ್ಶನ ಮಾಡುತ್ತಿತ್ತು. ಯಾವುದೊಂದು ಪ್ರಕರಣವು ಜಟಿಲ (Complicated) ಆಗುವದೂ ಸರಳ (natural) ಆಗುವದೂ ಆ ಪ್ರಕರಣವನ್ನು ವಿಚಾರಿಸುವವರ (Deal) ವ್ಯವಹಾರ ಮಾಡುವವರ ಕೈಯಲ್ಲಿಯೇ ಇರುವದು. ಪ್ರತಿಯೊಂದು ವ್ಯವಹಾರದಲ್ಲಿಯೂ ಆದಿ ಅಂತ್ಯ ಮಧ್ಯ ಇದ್ದೇ ಇರುವವು. ಇವುಗಳನ್ನು ಗುರುತಿಸಿ, ಅವುಗಳ ಹಿನ್ನೆಲೆ ಸದ್ಯದ ಸ್ಥಿತಿ ಮುಂದಿನ ಪರಿಣಾಮ ಮುಂತಾದುದನ್ನು ನಾವು ಸಹಜವಾಗಿ ನಿರ್ಧರಿಸ ಬಹುದು. ಈ ಕ್ರಮವು (Process) ಕಣ್ಣು ತಪ್ಪಿದರೆ ಮಾತ್ರ ಆ ಪ್ರಕರಣವು ಜಟಿಲವಾಗಿ ಬಿಡಿಸುವವರ ತಲೆ ತಿನ್ನುವದು.

ಮಕ್ಕಳ ನ್ಯಾಯಾಲಯದ (Juvenile Court) ನ್ಯಾಯಾಧೀಶರು ಬಹಳ ನುರಿತವರು. ಅಧಿಕಾರಿ ತನ್ನ ಪ್ರಕರಣವನ್ನು ಪೂರ್ವಾಪರ ಪರಿಶೀಲನೆ ಯಿಂದ ಅಭ್ಯಾಸಪೂರ್ಣವಾಗಿ ವಿಚಾಸಿರುವನೋ ಇಲ್ಲವೋ ಎಂಬುದನ್ನು ನಮ್ಮ ನ್ಯಾಯಾಧೀಶರು ನಾವು ನಮ್ಮ ಪ್ರಕರಣವನ್ನು ಅವರೆದುರು ಪ್ರಸ್ಥಾಪಿಸಿದ ಅರೆಕ್ಷಣದಲ್ಲಿಯೇ ನಿರ್ಧರಿಸುತ್ತಿದ್ದರು. ಅವರು ನ್ಯಾಯ ನಿಷ್ಠುರರಾದರೂ ದಯಾಮಯರು. ಎಷ್ಟೋ ಬಾಲಕ—ಬಾಲಿಕೆಯರ

ವಿಷಯಗಳನ್ನು ನಾನು ಅವರೆದುರು ಪ್ರಸ್ತಾಪಿಸಿದ್ದೇನೆ. ಅವರೆದುರು ಪ್ರ
ಪಾದಿಸಿದ್ದೇನೆ. ಅವುಗಳಲ್ಲಿ ಅನೇಕ ಪ್ರಸಂಗಗಳಲ್ಲಿ ಅವರು ನ್ಯಾಯಾಲ
ದಿಂದ ಅರ್ಧದಲ್ಲಿಯೇ ಎದ್ದು ವಿಶ್ರಾಂತಿಯ ಕೊಠಡಿಗೆ ಹೋಗಿ ನನ್ನ
ಕರೆಕಳುಹಿ ಕೆಲವು ಮಾತುಗಳನ್ನು ಹೇಳಿದ್ದಾರೆ. ಅವು ನನ್ನ ಸ್ಮೃತಿಪಟ
ಮೇಲೆ ಇಂದಿಗೂ ಸ್ಪಷ್ಟ ನಿಂತಿವೆ: (My dear young man
Don't develop the cases so radically and eventuall
It is enough if you give me the bare outlines. I
am convinced of your sincerity. I am too old to
stand this heart rending narration. You have
equal humanity in you as we the judicial heads
have. Let us all co-operate and do the maximum
good with minimum feelings that touch). "ನನ್ನ
ಪ್ರಿಯ ತರುಣ ಪ್ರಕರಣಗಳನ್ನು ಇಷ್ಟು ಆಮೂಲಾಗ್ರವಾಗಿ ಹೃದಯದ್ರಾವ
ವಾಗಿ ವಿಕಾಸಗೊಳಿಸಬೇಡ. ಸರಳ ರೂಪ ರೇಷೆಗಳನ್ನು ನನಗೆ ತಿಳಿಸಿದ
ಸಾಕು. ನಿನ್ನ ಪ್ರಾಮಾಣಿಕತೆ ನನಗೆ ಮನದಟ್ಟಾಗಿದೆ. ಹೃದಯವನ್ನ
ಮಂಥಿಸುವ ಈ ನಿನ್ನ ವಿವರಣೆಯನ್ನು ಸಹಿಸಲು ಸಾಧ್ಯವಿಲ್ಲ. ನಾನು
ಆಗಲೇ ವಯಸ್ಸಾದವನು. ನ್ಯಾಯಪತಿಗಳಾದ ನಮಗೆ ಇರುವಷ್ಟೆ
ಮಾನವೀಯತೆ ಮತ್ತು ದಯಾಭಾವ ನಿನ್ನಲ್ಲಿಯೂ ಇದೆ. ನಾವೆಲ್ಲರೂ
ಸಹಕರಿಸಿ ಅತಿ ಕಡಿಮೆ ಹೃದಯಸ್ಪರ್ಶಿ ಭಾವನೆಗಳಿಂದ ಅತಿ ಹೆಚ್ಚು
ಒಳ್ಳೆಯದನ್ನು ಮಾಡುವಾ." ಅವರ ಮಾತುಗಳನ್ನು ನೆನಪಿನಲ್ಲಿಟ್ಟುಕೊಂಡು
ನಾನು ಹರಪ್ರಸಾದನ ಪ್ರಕರಣವನ್ನು ನ್ಯಾಯಾಲಯದ ಎದುರು ಇಡಲು
ಸಿದ್ಧಗೊಳಿಸಿದೆನು.

***

(೮)

ಮಕ್ಕಳ ನ್ಯಾಯಾಲಯ ಮಕ್ಕಳ ಮನೆಯೇ ಸರಿ. ಮನೆಯ ಮಮತೆಯಲ್ಲಿ ಇರುವ ವ್ಯಾಮೋಹ ಮಾತ್ರ ನ್ಯಾಯಾಲಯದಲ್ಲಿ ಇರುವದಿಲ್ಲ. ಕೇವಲ ಮಗುವಿನ ಹಿತದ ದೃಷ್ಟಿಯಿಂದ ಇಲ್ಲಿ ಕಾರ್ಯಾಚರಣೆ ನಡೆಯಬೇಕಾಗುವದು. ಮಗುವಿನ ಮನಸ್ಸಿನ ಮೇಲೆ ಯಾವ ವಿಪರೀತ ಪರಿಣಾಮಗಳು ಆಗದಂತೆ ನ್ಯಾಯಾಲಯದಲ್ಲಿ ಪರಿಸ್ಥಿತಿಯನ್ನು ನಿರ್ಮಿಸಬೇಕಾಗುವದು. ಅದನ್ನು ಕಾಯ್ದುಕೊಂಡು ಹೋಗಬೇಕಾಗುವದು. ಅತಿಯಾದುದಕ್ಕೆ ಇಲ್ಲಿ ಪ್ರವೇಶವಿಲ್ಲ. ಬೆದರಿಕೆಯಂತೂ ಬಳಿಗೆ ಸುಳಿಯಬೇಕಾದುದಿಲ್ಲ. ಇಲ್ಲಿ ಮಗುವಿನ ಅಂತರ್ಯ ಸಹಜವಾಗಿ ಅರಳಬೇಕು. ವಿಕಾಸವಾಗಬೇಕು. (It should evolve) ಒತ್ತಾಯವನ್ನು ನ್ಯಾಯಾಲಯವು ಕಠೋರವಾಗಿ ದೂರಿರಿಸುವದು.

ಆದರ್ಶಗಳನ್ನು ಜೀವನದಲ್ಲಿ ಪರಿಪೂರ್ಣವಾಗಿ ಅಳವಡಿಸಿಕೊಳ್ಳುವದು ಸಾಧ್ಯವಿಲ್ಲವೆನ್ನುವವರು ಕೇವಲ ಸ್ವಾರ್ಥದಿಂದಾಗಲೀ ಆಲಸ್ಯದಿಂದಾಗಲೀ ಈ ಹುಯಿಲನ್ನೆಬ್ಬಿಸಿದ್ದಾರೆ. ಮನುಷ್ಯ ನಿರ್ಮಿತ ಸಾಮಾಜಿಕ ದೋಷಗಳನ್ನು ಮನುಷ್ಯ ಸಾಹಸವು ಕಿತ್ತಿಹಾಕಲಾರದೆ ? ಮಕ್ಕಳಲ್ಲಿರುವ ನ್ಯೂನತೆಗಳನ್ನು ಎಷ್ಟೋ ವಯಸ್ಕರಲ್ಲಿ ನಾವು ಕಾಣುವದು ಇಂಥ ಸಮಸ್ಯಾ ಪರಿಹಾರ ಸಮಯದಲ್ಲಿಯೆ. ಇವರಿಗೆ ನಾವು ಪ್ರೌಢಶಿಶುಗಳೆಂದು ನಾಮಕರಣ ಮಾಡಿಕೊಂಡು ಇಂಥ ವಯಸ್ಕರ ಮನೋಭೂಮಿಕೆಗಳಲ್ಲಿ ಮಾರ್ಪಾಡು ಮಾಡಿದಾಗಲೇ ಸಮಾಜದಲ್ಲಿರುವ ದೋಷಗಳನ್ನು ಕಿತ್ತಿಹಾಕಲು ಯೋಗ್ಯ ಪರಿಸ್ಥಿತಿಯು ಸಮಾಜದಲ್ಲಿ ನಿರ್ಮಾಣವಾಗುವದು.

ಹರಪ್ರಸಾದನ ಪ್ರಕರಣದಲ್ಲಿ ಇಂತಹ ವಯಸ್ಕರ ಕಿಡಿಗೇಡಿ ಹಸ್ತಕ್ಷೇಪಕ್ಕೆ ಅವಕಾಶವಿರಲಿಲ್ಲವೆಂದು ಭಾಪಿಸಲಾಗದು. ಈ ಕಿಡಿಗೇಡಿತನ ಅತ್ಯಂತ ಸನ್ನಿಹಿತ ಸಮಯದಲ್ಲಿಯೇ ತನ್ನ ಹಸ್ತವನ್ನು ಚಾಚುವದು. ಮಕ್ಕಳ ಪ್ರಕರಣವನ್ನು ಬಿಡಿಸುತ್ತಿರುವ ಅಧಿಕಾರಿಗೆ ಸುತ್ತೂ ಕಣ್ಣಿರಬೇಕು. ಯಾವ ಕಾಲದಲ್ಲಿ

ಯಾವ ರೀತಿಯಲ್ಲಿ ಈ ಕಿಡಿಗೇಡಿಗಳ ಕೈಚಳಕ ನಡೆದೀತೆಂಬುದನ್ನು ಹೇ
ಪಡು ಸಾಮಾನ್ಯ ದೃಷ್ಟಿಯವರಿಗೆ ಸಾಧ್ಯವಾಗುವದಿಲ್ಲ.

ಹರಪ್ರಸಾದನಲ್ಲಿ ತಮ್ಮ ಸ್ವಾರ್ಥವನ್ನಿರಿಸಿಕೊಂಡ ಒಂದೇ ಒಂ
ಗುಂಪು ಎಂದರೆ ಅನಾಥಾಶ್ರಮದ ಗುಂಪು. ಅನಾಥಾಶ್ರಮದ ಜಾಲಬ
(Net-work) ದ ಹರಡಿಕೆಯ ಪೂರ್ವಪರಿಚಯ ಪೂರ್ಣವಿದ್ದವ
ಮಾತ್ರ ಈ ಜಾಲತಂತ್ರಗಳಿಂದ ಪಾರಾಗಬಲ್ಲನು. ನನ್ನ ಸಹಾಯಕರ
ನಾನು ಎಷ್ಟು ಋಣಿ ಇದ್ದರೂ ತೀರದು. ನ್ಯಾಯಾಲಯದ ದಿನ ಸಮೀಪಿಸಿದಂ
ಪ್ರಸಾದನಿಗೆ ಗೊತ್ತಿಲ್ಲದಂತೆ ಅವನ ಸುತ್ತೂ ಪವಿತ್ರ ದೃಷ್ಟಿಯ ಕಾವಲನ್ನಿಟ್ಟ
ಅವನ ಪ್ರಾಣರಕ್ಷಣೆ ಮಾಡುತ್ತಿದ್ದರು. ಉದ್ದೇಶ ಪೂರ್ಣವಾದ ಈ ಕಾ
ಸುಳಿವು ಹರಪ್ರಸಾದನಿಗೆ ಸಿಗಲಿಲ್ಲ. ನಮ್ಮ ಬಾಲಕ ವಸತಿ ಗೃಹಕ್ಕೆ ಎಂ
ಬಾರದ ನಮ್ಮ ನಗರದಲ್ಲಿಯೇ ಎಂದೂ ಕಣ್ಣಿಗೆ ಬೀಳದ ವ್ಯಕ್ತಿಯೊಬ್ಬ ಅತ್ಯ
ಸರದಿಂದ ವಸತಿ ಗೃಹಕ್ಕೆ ಅತಿ ಸಮೀಪವಿರುವ ಎದುರಿನ ಗೃಹಸ್ಥರ ಮನೆ
ಬಂದುದನ್ನು, ಅಲ್ಲಿ ಹತ್ತು ಹದಿನೈದು ನಿಮಿಷ ಪ್ರಶ್ನೋತ್ತರಗಳನ್ನು ನ
ಯಿಸಿ ಹೋದುದನ್ನು ನಮ್ಮ ಸಹಾಯಕರಲ್ಲೊಬ್ಬನು ನೋಡಿ, ಎದುರ
ಗೃಹಸ್ಥರ ಮನೆಗೆ ಹೋಗಿ, ಆ ಪರಕೀಯನ ಪ್ರಸ್ತಾಪವನ್ನು, ನೆರೆಮನೆಯ
ನಂತೆ ಒಂದೇ ಬೀದಿಯಲ್ಲಿರುವವರಂತೆ ಮಾಡಿದನು. ಆ ಪರಕೀಯನನ್ನು
ಮನೆಯಲ್ಲಿದ್ದ ಹೆಣ್ಣುಮಕ್ಕಳು ಎಂದೂ ಕಂಡಿರಲಿಲ್ಲ. ಅವನು ಕೇಳಿದು
ಹಿಂದೀಯಲ್ಲಿ ಎರಡು ಪ್ರಶ್ನೆಗಳನ್ನು. ಎರಡೂ ಆ ಮನೆಯಲ್ಲಿದ್ದ ಹೆಣ್ಣು
ಮಕ್ಕಳಿಗೆ ಅರ್ಥವಾಗಲಿಲ್ಲ. ಪರಕೀಯನ ಈ ಧಾಷ್ಟ್ರ್ಯತೆಗೆ ಆ ಹೆಣ್ಣು
ಮಕ್ಕಳು ಕಣ್ಣು ಕೆಂಪಗೆ ಮಾಡಿದ ಕೂಡಲೇ ಆ ಪರಕೀಯ ತನ್ನ ಕಾಲುಗಳಿ
ಬುದ್ಧಿ ಹೇಳಿದನು. ನಮ್ಮ ಸಹಾಯಕ ಆ ಹೆಣ್ಣುಮಕ್ಕಳಿಗೆ "ಅಭಯ"ವನ್ನು
ಹೇಳಿ, ಇನ್ನೊಮ್ಮೆ ಆ ಪರಕೀಯನು ಬಂದರೆ ತನ್ನನ್ನು (ಸಹಾಯಕನನ್ನು)
ಕರೆಕಳುಹಲು ತಿಳಿಸಿ ಬಂದಿದ್ದನು.

ಆ ಪರಕೀಯನ ಅವಸರದ ಸಂದರ್ಶನ ನಮ್ಮ ಸಹಾಯಕರ ಕಣ
ಕಿವಿಗಳನ್ನು ಎಚ್ಚರಿಸಿತ್ತು. ಆ ಪರಕೀಯನನ್ನು ಅವರಲ್ಲಿ ಒಬ್ಬನು ಬೆನ್ನಟ

ಬಹುದಾಗಿತ್ತು. ಆದರೆ, ಆತ ಏನೊಂದು ಕುಂಟುನೆವ ಹೇಳಿ ಪಾರಾಗುವದಕ್ಕೆ ಹೆಚ್ಚು ಅವಕಾಶವಿತ್ತು. ನಮಗೆ ಬೇಕಾದುದು ಪೂರ್ಣ ನಿದರ್ಶನ. ಪ್ರತ್ಯಕ್ಷ ಕಂಡ ನಂತರ ಪ್ರಮಾಣಿಸುವದು ತಾನೆ. ನಾನು ನನ್ನ ಸಹಾಯಕರಿಗೆ ಸೂತ್ರಗಳನ್ನು ಇನ್ನಷ್ಟು ಸಡಿಲು ಬಿಡುವಂತೆ ಹೇಳಿದೆ. ಸೂತ್ರಧಾರಿಗಳಾಗಿ ಮಾತ್ರ ಅವರು ಯಾವಾಗಲೂ ಇರಬೇಕು. ಜಾಗ್ರತರಿರಬೇಕು. (To let loose the strings, but to hold them firmly and vigilantly)

ನಾನು ಕೊಟ್ಟ ಸೂಚನೆಗಳನ್ನು ನನ್ನ ಸಹಾಯಕರು ಅರ್ಥವತ್ತಾಗಿ ಅರಿತುಕೊಂಡು, ಅಕ್ಷರಶಃ ಪಾಲಿಸಿ ನಡೆದುಕೊಂಡದ್ದರಿಂದಲೇ ನಾವು ಹರ ಪ್ರಸಾದನ ಪ್ರಕರಣದ ವಿಚಾರಣೆಯಲ್ಲಿ ಹೇಳಿಕೊಳ್ಳುವಂತಹ ಹೆಸರು ಪಡೆದಿದ್ದೇವೆ.

ಈ ಮಾನವೀ ಸಾಹಸದಲ್ಲಿ ದೊರೆಯುವ ಅಮಿತಾನಂದ ಕೇವಲ ಕೆಲವೇ ಅರಿತು ಆಡುವ ಪಾತ್ರಧಾರಿಗಳಿಗೆ ಮಾತ್ರ ದೊರೆಯುವದು. ನಾವು ಯಾರನ್ನೂ ಹಿಂಸಿಸುವದಿಲ್ಲ. ಆದರೆ, ನಮ್ಮ ದೃಷ್ಟಿಗೆ ಬಿದ್ದ ಯಾರ ಹಿಂಸೆಗೂ ಅವಕಾಶಕೊಡುವದಿಲ್ಲ. ಈ ಪ್ರತಿಕ್ಷಣದ ರಕ್ಷಣೆಯನ್ನು ಅಪಾರ್ಥ ಮಾಡಿಕೊಳ್ಳುವ "ಸ್ವಾರ್ಥಸಾಧಕ ಪರಕೀಯರು" ನಮ್ಮನ್ನು ತಮ್ಮ ಶತ್ರು ವರ್ಗದಲ್ಲಿ ಎಣಿಸಿ, ಯಾವುದೇ ಹೀನಕೃತಿಯನ್ನು ನಮ್ಮ ಮೇಲೆ ಎಸಗಲೂ ಸಿದ್ಧರಿರುತ್ತಾರೆ. ಇದಕ್ಕೆ ಪರಮೋಪಾಯವೆಂದರೆ ನೀವು ಮಾಡುತ್ತಿರುವ ಸತ್‌ಕಾರ್ಯದಲ್ಲಿ ಪ್ರಮಾಣಪೂರ್ವಕವಾಗಿ ಶ್ರದ್ಧಾಯುಕ್ತವಾಗಿ ಸತತ ಪ್ರಯತ್ನದಲ್ಲಿ ಇರುವದೇ ಎನ್ನಬಹುದು.

ನಮ್ಮ ಕೃತಿ ಕೌಶಲ್ಯವೇ ನಮ್ಮ ರಕ್ಷಾ ಕವಚ. ಆತ್ಮ ಅವಿನಾಶಿ. "ಯೋಗಃ ಕರ್ಮಸು ಕೌಶಲಂ" ಎಂದು ಭಗವಂತನ ವಾಣಿಯಿಲ್ಲವೆ?

ಸಮಯಕ್ಕೆ ಸರಿಯಾಗಿ ಆ ಪರಕೀಯ ತಾನು ದೂರಿದ್ದುಕೊಂಡೇ ತನ್ನ ಅಪಕಾರ್ಯವನ್ನು ಮಾಡಿಯೇ ಬಿಟ್ಟನು. ನನ್ನ ಕಾರ್ಯಾಲಯದಿಂದ ನನ್ನ ಕಾರ್ಯಕ್ರಮದ ವಿಷಯದಲ್ಲಿ ಅವನಿಗೆ ಎಳ್ಳಷ್ಟೂ ಸುಳಿವು ಹತ್ತಿರದಿದ್ದರೂ

ಆ ಪರಕೀಯನು ಸಕಾಲದಲ್ಲಿ ಪ್ರಯೋಜನಕಾರಿಯಾಗಬಹುದಾದ ಅಭಿಪ್ರಾ ವನ್ನು ಮಾಡಿದ್ದುದು ನಿಜವಾಗಿಯೂ ಅವನ ಚಾಲಕತನಕ್ಕೆ ತಕ್ಕ ಚಿಲುಷ ನಿದರ್ಶನವಾಗಿತ್ತು.

ನನ್ನ ಸಹಾಯಕರಲ್ಲಿ ಒಬ್ಬನು ಆ ಪರಕೀಯನನ್ನು ಅಂದು ದೂರಿಂದಾ ದರೂ ಪೂರ್ಣ ಮುಖಪರಿಚಯವುಳಿಯುವಂತೆ ನೋಡಿದ್ದನು. ಇದನ್ನು ನನ್ನ ಸಹಾಯಕನನ್ನು ಕರೆದು ವಿಚಾರಿಸಿ ಮನವರಿಕೆ ಮಾಡಿಕೊಂಡಿದ್ದೆನು. ಮುಂ ಘಟಿಸಬಹುದಾದ ವಿಷಯಗಳಿಗೆ ಯೋಗ್ಯ ಪರಿಹಾರ ಪ್ರತೀಕಾರಗಳನ್ನು ಮನ ಸ್ಸಿನಲ್ಲಿಯೇ ಸಿದ್ಧಗೊಳಿಸಿಕೊಂಡಿದ್ದೆನು. ನನ್ನ ಸಹಾಯಕರು ನನ್ನ ಮನಸ್ಸಿ ಭವಿಷ್ಯದ ಸಿದ್ಧತೆಗಳ ವಿಷಯದಲ್ಲಿ ಹೆಚ್ಚಿನ ಉತ್ಸುಕತೆ ತೋರಿಸಿ “ಭ ಯನ್ನು ಕೆಡಿಸುವ” ಪ್ರಸಂಗಗಳನ್ನು ತರುತ್ತಿದ್ದಿಲ್ಲ. ಅವರಿಗೆ ತಿಳಿಸಿದಂತೆ ಎಲ್ಲ ಪರಿಸ್ಥಿತಿಗಳನ್ನೂ ಅವಕಾಶಗಳನ್ನೂ ಸಿದ್ಧಮಾಡಿಟ್ಟುಕೊಳ್ಳುವ ಕರ್ತವ್ಯ ಪಾಲನೆಯಲ್ಲಿ ಮಾತ್ರ ಅವರು ನಿರತರು. ಮಕ್ಕಳ ನ್ಯಾಯಾಲಯದ ದಿನ ಮುಂಜಾನೆ ಏಳು ಗಂಟೆಗೆ ನಾನು ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ಪೂರ್ಣ ನಿರ್ಮಲ ಮನಸ್ಸಿನಿಂದ ಕಾರ್ಯಾಲಯಕ್ಕೆ ಬಂದೆನು. ಅಂದಿನ ವಿಚಾರಣೆಗೆ ಬೇಕಾಗಿರುವ ಎಲ್ಲ ಬಾಲಕರ ಪ್ರಕರಣಗಳನ್ನು ಪುನರ್ವಿಮರ್ಶಿಸಿ ನೋಡಿಟ್ಟುಕೊಂಡೆನು. ಆ ಬಾಲಕರನ್ನು ಕರೆಯಿಸಿ ಅವರ ಆರೋಗ್ಯ ಮೊದ ಲಾದವುಗಳ ವಿಷಯವಾಗಿ ವಿಚಾರಿಸಿದೆನು. ಒಂಬತ್ತು ಗಂಟೆಗೆ ನನ್ನ ಎಲ್ಲ ಪೂರ್ವಸಿದ್ಧತೆಗಳು ಮುಗಿದವು. ಸ್ಥಳೀಯ ಬಾಲಕರ ಪಾಲಕರು ತಾಯಿ ತಂದೆಗಳು ಅಂದಿನ ವಿಚಾರಣೆಗೆ ಅವಶ್ಯವಿದ್ದವರು ಎಲ್ಲರೂ ಬಂದಿದ್ದರು. ಪ ಊರಿಗೆ ಪರನಾಡಿಗೆ ಹೋಗುವ ಮಕ್ಕಳ ಪಾಲಕರ ತಾಯಿ ತಂದೆಗಳ ಅವಶ್ಯ ಕತೆಯೇ ಇರಲಿಲ್ಲವಷ್ಟೆ. ಅವರಿಗೆ ಸಂಬಂಧಿಸಿದ ಕಾಗದಪತ್ರಗಳು ಸೂತ್ರಬದ್ಧ ವಾಗಿದ್ದರೆ ಆಯಿತು. ಆಜ್ಞೆ ಮಾಡುವ ನ್ಯಾಯಾಲಯಕ್ಕೆ ಅವು ಒಪ್ಪಿತವಾಗಿ ವವು. ಅಂದು ನನಗೆ “ಎದೆಗುದಿ”ಯಿಲ್ಲದ್ದರಿಂದ ಮನಸ್ಸು ಪ್ರಶಾಂತವಾಗಿತ್ತು.

———

[೯]

ಸಮಯಕ್ಕೆ ಸರಿಯಾಗಿ ನ್ಯಾಯಾಧೀಶರು ಬಂದರು. ಅವರು ತಮ್ಮ ವಾಹನದಿಂದಿಳಿಯುತ್ತಲೇ ಮಕ್ಕಳ ಪಾಲಕರು ತಾಯಿತಂದೆಗಳು, ಪೋಲೀಸ ಅಧಿಕಾರಿಗಳು, ಸಂಬಂಧಿಸಿದ ತಜ್ಞರು ನಮಸ್ಕರಿಸಿ ಸ್ವಾಗತಿಸಿದರು.

ನ್ಯಾಯಾಧೀಶರು ಇನ್ನು ನ್ಯಾಯಾಲಯದೊಳಗೆ ಅಡಿಯಿಡುವವರು. ಅಷ್ಟರಲ್ಲಿಯೇ ಒಬ್ಬ ಸಾಧು ಎಲ್ಲಿಂದಲೋ ಬಂದು ನ್ಯಾಯಾಧೀಶರಿಗೆ ಅತಿ ವಿನಯದಿಂದ ನಮ್ಸ್ಕರಿಸಿ ಅತ್ಯಂತ ದುಃಖದಿಂದ ಕಂಠವನ್ನು ಗದ್ಗದಿಸುತ್ತ ಮಾತು ಬಾರದವನಾಗಿ ನಿಂತನು. ಅವನಿಗೆ ಅತ್ಯಂತ ಮಹತ್ವದ ವಿಷಯವನ್ನು ನ್ಯಾಯಾಧೀಶರಿಗೆ ಅರುಹುವದಿತ್ತು ಎಂಬುದು ಅವನ ಮುಖದಿಂದ ತಿಳಿಯುತ್ತಿತ್ತು.

ನ್ಯಾಯಾಧೀಶರು ಅವನಿಗೆ ಬೇಕಾಗಿರುವದಾದರೂ ಏನು ಎಂದು ಪ್ರಶ್ನಿಸಿದರು. ಆ ಸಾಧು ಹಿಂದಿಯಲ್ಲಿ "ನನಗೆ....ಬಹಳ....ಅನ್ಯಾಯವಾಗಿದೆ" ಎಂದು ಅಳಹತ್ತಿದನು.

ನ್ಯಾಯಾಧೀಶರು ಬಹಳ ಸೂಕ್ಷ್ಮಗ್ರಾಹಿಗಳು. ತುಸು ಸಿಡಿಕಿನಿಂದ, "ನಾನು ಬೀದಿಯಲ್ಲಿ ನ್ಯಾಯವಿಚಾರಣೆ ಮಾಡಲಾರೆನು. ನ್ಯಾಯಾಲಯಕ್ಕೆ ನಿನ್ನನ್ನು ಕರೆಯಿಸಲಾಗುವದು. ನಿನಗೆ ಹೇಳಬೇಕಾದುದನ್ನು ಅಲ್ಲಿ ಹೇಳು" ಎಂದು ನ್ಯಾಯಾಲಯದ ಕಾರ್ಯದರ್ಶಿಗೆ "ಈ ಸಾಧುವಿನ ವಿಷಯವನ್ನು ಈ ದಿನದ ಕಾರ್ಯಕ್ರಮದಲ್ಲಿ ಸೇರಿಸಿಕೊಳ್ಳಬೇಕು" ಎಂದು ಹೇಳಿ ಒಳಗೆ ಹೋದರು.

ನಾನು ಮಾತ್ರ ಒಂದು ಬದಿಗೆ ನಿಂತು ಆ ಸಾಧುವಿನ ಕಣ್ಣಿಗೆ ಬೀಳದಂತೆ, ಅವನನ್ನು ಪರೀಕ್ಷಿಸಿದೆನು. ನಾನವನನ್ನು ನೋಡಿದುದು ಇದು ಮೊದಲನೆಯ ಸಾರೆ. ಆದರೆ ಅವನು ಸಾಧು ಮಾತ್ರವಲ್ಲ. ಅವನು ವಿಶಿಷ್ಟ ಉದ್ದೇಶದಿಂದ ಬಂದ "ಕಿಡಿಗೇಡಿ ಪರಕೀಯ"ನೆಂದು ನಿರ್ಧರಿಸಿದೆನು. ಅಷ್ಟರಲ್ಲಿ ನನ್ನ

ಸಹಾಯಕ ಬಂದು ಇವನೇ ಆ ದಿನ ಬಂದ ಪರಕೀಯನೆಂದು ಗುರುತಿ
ದ್ದನ್ನು ತಿಳಿಸಿ ಹೋದನು. ಆ ಸಹಾಯಕನಿಗೆ ಈ ವಿಷಯವನ್ನು ಪ್ರಸ
ಗೊಳಿಸಿ ಗಡಿಬಿಡಿ ಎಬ್ಬಿಸಕೂಡದೆಂದು ಕಟ್ಟಪ್ಪಣೆಯಿತ್ತು. ಸಹಾಯ
ಬಸವಂತನಿಗೆ ಈ ವಿಷಯದಲ್ಲಿ ಕೆಲವು ಸೂಚನೆಗಳನ್ನಿತ್ತು ಹೊರಗೆ ಕಳುಹಿ
ದೆನು. ಹತ್ತು ನಿಮಿಷಗಳಲ್ಲಿ ಬಸವಂತನು ತನ್ನ ಸಮವಸ್ತ್ರಗಳನ್ನು (Uni-
form) ತೆಗೆದಿಟ್ಟು ಪೂರ್ಣ ಸಾದಾ ಉಡುಪಿನಲ್ಲಿ ಬಂದು ಸಾಧುಮಹಾರಾ
ನಿದ್ದ—ಪಾಲಕ ತಾಯಿತಂದೆ ಮೊದಲಾದವರ ಗುಂಪಿನಲ್ಲಿ ಸೇರಿಕೊಂಡನು
ನಾನು ನ್ಯಾಯಾಲಯದಲ್ಲಿ ಹೋಗಿ ನನ್ನ ಕಾರ್ಯದಲ್ಲಿ ನಿರತನಾದೆನು. ಮಕ್ಕ
ನ್ಯಾಯಾಲಯದಲ್ಲಿ ಮಕ್ಕಳೊಂದಿಗೆ ಸರಸಸಲ್ಲಾಪಗಳು ಆತ್ಮೀಯವಾಗಿ ನಡೆ
ಯುತ್ತವೆ. ಅಲ್ಲಿ ಯಾಂತ್ರಿಕವಾಗಿ ಕಾಯದೆ ಕಾನೂನುಗಳ ಬಳಕೆಯಿರು
ದಿಲ್ಲ. ನ್ಯಾಯಾಧೀಶರು ಬಾಲಕರ ಸರಳ ಮಾತುಗಳಿಗೆ ಒಮ್ಮೊಮ್ಮೆ ಮು
ರಾಗಿ ಭಾವನಾ ಪರವಶರಾಗುತ್ತಾರೆ. ನ್ಯಾಯಾಧೀಶರು ಬಾಲಕರ ವಸ
ಗೃಹದಲ್ಲಿರುವ ಎಲ್ಲ ಮಕ್ಕಳ ಯೋಗಕ್ಷೇಮವನ್ನು ಪ್ರತಿವಾರ ವಿಚಾರಿಸಿ
ಅಂದಿನ ವಿಶಿಷ್ಟ ಪ್ರಕರಣಗಳ ವಿಚಾರಣೆಗೆ ಕೈ ಹಾಕುತ್ತಾರೆ. ಈ ವಸತಿಗೃಹ
ಮಕ್ಕಳು ನ್ಯಾಯಾಧೀಶರ ಆಜ್ಞಾನುಸಾರ ಈ ವಶದಲ್ಲಿ (Custody)
ರುತ್ತಾರೆ ಅವರ ಯೋಗಕ್ಷೇಮದ ಸಂಪೂರ್ಣ ಹೊಣೆಗಾರಿಕೆ ನ್ಯಾಯಾ
ಯಕ್ಕೆ ಸಂಬಂಧಿಸಿದ್ದು. ಈ ವಸತಿ ಗೃಹದಲ್ಲಿ ಅಧಿಕಾರಿಗಳಿಂದ ಹಿಡಿದು ಸಹಾ
ಯಕರ ತನಕ ದುಡಿಯುವವರೆಲ್ಲರೂ ನ್ಯಾಯಾಲಯದ ಅಧಿಕಾರ ಕಕ್ಷೆಯ
ಲ್ಲಿಯೇ ಬರುವರು.

ಇಂತು ಅಂದು ಈ ಯೋಗಕ್ಷೇಮದಲ್ಲಿ ನ್ಯಾಯಾಲಯದ ಅರ್ಧಸಮಯ
ಗತಿಸಿತು. ನನ್ನ ಸಹೋದ್ಯೋಗಿಗಳು ಅಂದು ತಮ್ಮ ಕೆಲವು ಮಹತ್ವದ ಪ್ರಕ
ರಣಗಳನ್ನು ನ್ಯಾಯಾಲಯದ ಮುಂದೆ ಇರಿಸಿದ್ದರು. ಕೆಲವು ಹೆಣ್ಣುಮಕ್ಕಳ
ವಿಚಾರಣೆಯೂ ಅಂದಿಗೆ ನಿಯಮಿತವಿದ್ದಿತು. ಇಂತು ಅಂದು ಹನ್ನೆರಡು ಪ್ರಕ
ರಣಗಳು ನ್ಯಾಯಾಲಯದೆದುರು ಇದ್ದವು-

ನ್ಯಾಯಾಧೀಶರು ಮೊದಲು ಆ ಹನ್ನೆರಡು ಮಕ್ಕಳ ವಿಷಯವಾಗಿ
ಸ್ಥೂಲ ವಿಚಾರಣೆಮಾಡಿದರು. ಜಟಿಲವಿದ್ದವುಗಳನ್ನು ಹಿಂಡಕ್ಕೆ ತಳ್ಳಿ ಸರಳ

ಇದ್ದವುಗಳ ವಿಚಾರಣೆ ಮುಗಿಸಿ, ನಾಲ್ಕು ಪ್ರಕರಣಗಳನ್ನು ಮಾತ್ರ ಸಾವಕಾಶದ ವಿಚಾರಣೆಗೆ ಮೀಸಲಿಟ್ಟರು. ಆ ನಾಲ್ಕರಲ್ಲಿ ಹರಪ್ರಸಾದನ ವಿಚಾರಣೆ ಕೊನೆಯದೆಂದು ನಿಶ್ಚಿತವಾಯಿತು.

ನ್ಯಾಯಾಧೀಶರು ತಮ್ಮ ಜೊತೆಯಲ್ಲಿರುವ ಇಬ್ಬರು ಗೌರವ ನ್ಯಾಯಾಧೀಶರಿಗೆ ಈ ಪ್ರಕರಣವನ್ನು ಕೊನೆಗೆ ಇಟ್ಟುದರ ಕಾರಣವನ್ನು ಹೇಳುತ್ತ, "ಇದು ಬಹಳ ಮಾರ್ಮಿಕ ಪ್ರಕರಣವಿದೆ. ನಾವೆಲ್ಲರೂ ಇಂತಹ ಪ್ರಕರಣಗಳನ್ನು ನಮ್ಮ ಕಾಲಮಾನದಲ್ಲಿ ಒಮ್ಮೆ ಅಥವಾ ಎರಡು ಬಾರೆ ವಿಚಾರಿಸುವ ಸುಯೋಗವನ್ನು ಪಡೆಯುವೆವು. ಈ ಪ್ರಕರಣದಿಂದ ಈ ಬಾಲಕರ ಸಮಸ್ಯೆಯ ಅನೇಕ ಮುಖಗಳನ್ನು ನಾವು ಪ್ರತ್ಯಕ್ಷವಾಗಿ ಕಾಣಬಹುದು" ಎಂದರು. ಉಳಿದವರೂ ಒಪ್ಪಿದರು.

ಉಳಿದ ಮೂರು ಪ್ರಕರಣಗಳಲ್ಲಿ ಎರಡು ಬಾಲಿಕೆಯರಿಗೆ ಸಂಬಂಧಪಟ್ಟವು. ಒಂದು ತೀರ ಚಿಕ್ಕ ಬಾಲಕನಿಗೆ ಸಂಬಂಧಿಸಿದುದು. ಬಾಲಿಕೆಯರು ತಮ್ಮ ಮನೆಗಳನ್ನು ಬಿಟ್ಟು ಬಂದು ಎರಡು ವರ್ಷಗಳ ಮೇಲೆ ಆದರೂ, ತಮ್ಮ ತಾಯಿತಂದೆಗಳ ವಿಳಾಸವನ್ನು ನಮಗೆ ತಿಳಿಸುವ ಕೃಪೆ ಮಾಡಿದ್ದಿಲ್ಲ. ನಮ್ಮ ಸಹೋದ್ಯೋಗಿನಿ ಬಹಳ ಕಷ್ಟ ಪಟ್ಟು ಒಬ್ಬಳ ವಿಳಾಸವನ್ನು ಪಡೆದಳು ಈ ವಾರದಲ್ಲಿ. ಇನ್ನೊಬ್ಬಳು ಮಾತ್ರ ಆ ಸೌಜನ್ಯವನ್ನು ತೋರಲಿಲ್ಲ. ಆದರೂ ನ್ಯಾಯ್ಯಾಲಯು ಈ ಇವರಿಬ್ಬರ ನಿರ್ಣಯ ಮುಗಿಸಲೇಬೇಕೆಂಬ ಹಟದಿಂದ ಅವರ ಪ್ರಕರಣ ಪ್ರಾರಂಭಿಸಿತು. ಒಬ್ಬಳ ಪ್ರಕರಣವನ್ನು ಹಗುರಾಗಿ ಮುಗಿಸಿದರು ನ್ಯಾಯಾಧೀಶರು. ಇನ್ನೊಬ್ಬಳ ವಿಚಾರಣೆ ಪ್ರಾರಂಭಿಸಬೇಕೆನ್ನುವಷ್ಟರಲ್ಲಿ ನ್ಯಾಯಾಧೀಶರಿಗೆ ಏನೋ ನೆನಪಾಯಿತು. "ಹೊರಗೆ ನಿಂತಿರುವ ಆ ಸಾಧುವನ್ನು ಕರೆದು ತಾ" ಎಂದು ಸೇವಕನಿಗೆ ಆಜ್ಞೆಯಿತ್ತರು. ಇನ್ನೂ ಸೇವಕ ನ್ಯಾಯಾಲಯದ ಬಾಗಿಲು ತೆಗೆದು ಹೊರಗೆ ಹೋಗಿದ್ದಿಲ್ಲ. ಅಷ್ಟರಲ್ಲಿ, ಇನ್ನೊಂದು ಹುಡುಗಿಯಿದ್ದವಳು, ಸರ್ರನೆ ನ್ಯಾಯಾಧೀಶರ ಹತ್ತಿರ ಹೋಗಿ ಅವರ ಕಾಲುಹಿಡಿದಳು. ನ್ಯಾಯಾಧೀಶರು ಗಂಟೆ ಬಾರಿಸಿ ಸೇವಕನಿಗೆ ಕರೆದು, " ಸ್ವಲ್ಪತಡೆ. ಯಾವುದೋ ಬಿಡಿಸುವಾಗ ಇನ್ನಾವುದೋ ಬಿಡಿಸಿಕೊಳ್ಳುತ್ತಿದೆ.

ಈ ವಿನೋದವನ್ನಷ್ಟು ಅರ್ಥಮಾಡಿಕೊಂಡು, ಈ ಬಾಲಿಕೆಯ ಸಮ
ಬಗೆಹರಿಸಲು ಯತ್ನಿಸುವಾ” ಎಂದು ಆ ಬಾಲಿಕೆಯ ಪ್ರಕರಣವನ್ನ
ವಿಚಾರಣೆಗೆ ತೆಗೆದುಕೊಂಡರು.

[೧೦]

ನ್ಯಾಯಾಲಯದಲ್ಲಿ ಎಲ್ಲರ ಕಣ್ಣುಗಳು ಅರಳಿದವು. ಎಲ್ಲರ ಕಿವಿಗಳ ನಿಮಿರಿದವು. ಒಂದೆರಡು ಕ್ಷಣ ನ್ಯಾಯಾಲಯ ಸ್ತಬ್ಧವಾಗಿತ್ತು. ನ್ಯಾಯಾಧೀಶರು ಆ ಬಾಲಿಕೆಯನ್ನು ಬಳಿಗೆ ಕರೆದು, “ನಿನಗೇನು ಅಂತ ಭಯ?” ಎಂದರು. ಆ ಬಾಲಿಕೆಯು ಈ ವಸತಿ ಗೃಹದಲ್ಲಿದ್ದ ಎ ವರ್ಷಗಳ ಸಮಯದಲ್ಲಿ ಅಚ್ಚ ಕನ್ನಡದವಳಾಗಿದ್ದಳು. ಹೆಚ್ಚು ಕಡಿ ಹದಿಮೂರು ವರ್ಷದವಳು. ಇಲ್ಲಿಗೆ ಬಂದ ನಂತರ ಅವಳು ಸ್ವಲ್ಪ ಎತ್ತ ಬೆಳೆದಿದ್ದಳು. ಇವಳನ್ನು ನಮ್ಮ ಸಹೋದ್ಯೋಗಿನಿ ತಮ್ಮ ವಶಕ್ಕೆ ತೆಗೆ ಕೊಂಡಾಗ, ಈ ಬಾಲಿಕೆ ತೀರ ನಿಕೃಷ್ಟ ಪರಿಸ್ಥಿತಿಯಲ್ಲಿದ್ದಳು. ರೈ ನಿಲ್ದಾಣದಲ್ಲಿ ಒಂದು ಮೂಲೆಯಲ್ಲಿ ಹಸಿವಿನಿಂದ ದೂರಪ್ರವಾಸದಿಂ ಕಂಗಾಲಾಗಿ ಸೊರಗಿ ನಿಸ್ತೇಜವಾಗಿ ಬಿದ್ದಿದ್ದ ಈ ಬಾಲಿಕೆಯನ್ನು ಮಡಿವಂತರು ಮುಟ್ಟಲೂ ಹೇಸಿಕೊಳ್ಳಬಹುದಿತ್ತು. ಅಂಜಿಕೊಳ್ಳಬಹುದಿತ್ತು. ಪಿಸುಕ್ಕನೆ ಈ ಬಾಲೆ ಪ್ರಾಣಬಿಡಬಹುದೆಂದು. ನಿಲ್ದಾಣದಲ್ಲಿದ್ದ ಸೌಕರ್ಯಗಳಿಂ ಅವಳನ್ನು ಮೊದಲು ನಗರ ಸಭೆಯ ಔಷಧಾಲಯಕ್ಕೆ ಕಳುಹಿ, ಅವಳಿಗೆ ಅಲ್ಲಿ ಪ್ರವೇಶ ಪಡೆದು, ನಮ್ಮ ಸಹೋದ್ಯೋಗಿನಿ ಅವಳ ವಿಷಯವನ್ನು ನ್ಯಾಯಾಲಯಕ್ಕೆ ಬರೆದು ತಿಳುಹಿದ್ದಳು. ನ್ಯಾಯಾಧೀಶರ ಅನುಮತಿ ಪತ್ರವನ್ನು ಪಡೆದುಕೊಂಡಿದ್ದಳು. ಮೂರು ತಿಂಗಳು ಪೂರ್ಣ ಶುಶ್ರೂಷೆಯಾದ ಅನಂತರ ಈ ಬಾಲಿಕೆ ಎದ್ದು ಆಡ್ಡಾಡುವಂತಾದಳು. ನಾಲ್ಕನೆಯ ತಿಂಗಳು ಎರಡನೆಯ ವಾರದಲ್ಲಿ ಅವಳನ್ನು ವಸತಿ ಗೃಹಕ್ಕೆ ತರಲು ಡಾಕ್ಟರರು ಅನುಮತಿ ಕೊಟ್ಟರು. ಅನಂತರ ಅವಳೊಡನೆ ಅವ

ಹಿಂದು–ಮುಂದಿನ ಆಗು ಹೋಗುಗಳ ಬಗೆಗೆ ನಮ್ಮ ಸಹೋದ್ಯೋಗಿನಿ ವಿಚಾರಣೆಯನ್ನು ಪ್ರಾರಂಭಿಸಿದಳು. ವ್ಯಕ್ತಿಶಃ ಬಾಲಿಕೆ ಸಜ್ಜನ ಸ್ವಭಾವದವಳು ಆದರೆ ಅವಳು ತನ್ನ ಊರು ದೇಶಕೋಶ, ತಾಯಿ–ತಂದೆ, ಬಂಧು–ಬಳಗದವರ ವಿಷಯದ ಪ್ರಸ್ತಾಪ ಬಂದಾಗ ಮಾತ್ರ ಗಂಭೀರ ಮೌನವನ್ನು ಆಚರಿಸುತ್ತಿದ್ದಳು. ಹೆಚ್ಚು ಬೆದರಿಸಿದರೆ ಕಣ್ಣೀರಿನ ಕೋಡಿಯನ್ನೇ ಉಕ್ಕಿಸುತ್ತಿದ್ದಳು. ನ್ಯಾಯಾಲಯದವರು ಅವಳಿಗೆ ಯಾವ ಒತ್ತಾಯವೂ ಬೇಡವೆಂದೂ, ಅವಳ ಪ್ರಕೃತಿ ಸುಧಾರಿಸಿ, ಅವಳಲ್ಲಿ ತನ್ನವರ ಬಗೆಗೆ ಸ್ವಯಂ ಬುದ್ಧಿಯಿಂದ ಆದರ ಹುಟ್ಟುವ ತನಕ ಕಾಯಬೇಕೆಂದೂ ಅಭಿಪ್ರಾಯ ಪಟ್ಟಿದ್ದರಿಂದ, ಅವಳನ್ನು ಅವಳ ಪಾಲಿಗೇ ಬಿಡಲಾಗಿತ್ತು.

ಒಂದು ವಿಷಯವನ್ನು ಮಾತ್ರ ನಾವು ಅವಳ ಬಗೆಗೆ ನಮ್ಮ ಅಭ್ಯಾಸ ಬಲದಿಂದ ಗುರುತಿಸಿದ್ದೆವು. ಅವಳ ತೀವ್ರಭೀತಿಯು ಅವಳ ನಡೆ ನುಡಿಗಳಲ್ಲಿ ಉಳಿದ ಬಾಲಿಕೆಯರೊಂದಿಗೆ ಅವಳ ವರ್ತನೆಯಲ್ಲಿ ಕಂಡುಬರುತ್ತಿತ್ತು. ಅವಳು ಸದಾ ಎಚ್ಚರಿಕೆಯಿಂದಿರುತ್ತಿದ್ದಳು. ನಿದ್ರೆಯಲ್ಲಿ ಒಮ್ಮೆಲೆ ಎದ್ದು ಕುಳಿತು, ಮೈಯೆಲ್ಲ ನಡುಗಿಸುತ್ತಿದ್ದಳೆಂದು ಪರಿಚಾರಿಕೆಯ ಟಿಪ್ಪಣಿಗಳಲ್ಲಿ ಆಗಾಗ ಬರೆಯಲಾಗಿದ್ದನ್ನು ನಾವು ಓದಿದ್ದೆವು. ಉಳಿದ ಬಾಲಿಕೆಯರು ಸಾಮೂಹಿಕವಾಗಿ ನಗರದಲ್ಲಿ ಯಾವುದಾದರೊಂದು ಕಾರ್ಯಕ್ರಮದಲ್ಲಿ ಭಾಗ ತೆಗೆದುಕೊಳ್ಳಲು ಹೋದಾಗ ಈ ಬಾಲಿಕೆ ಯಾವಾಗಲೂ ಗುಂಪಿನ ಮಧ್ಯದಲ್ಲಿ ಇದ್ದು ಸುತ್ತೂ ಬೆದರಿದ ಕಣ್ಣುಗಳಿಂದ ನೋಡುತ್ತಿದ್ದಳೆಂಬ ಮಾತು ನಮ್ಮ ನಿರ್ಣಯಕ್ಕೆ ಪುಷ್ಟಿಯನ್ನೀಯುತ್ತಿತ್ತು. ತನ್ನ ಮೇಲಾಧಿಕಾರಿಣಿಯೊಂದಿಗೆ ವಸತಿ ಗೃಹದಲ್ಲಿದ್ದಾಗ. ಈ ಬಾಲಿಕೆಯು ನೀಡುತ್ತಿದ್ದ ಸಹಕಾರ ಸೇವೆಯನ್ನು ಅಧಿಕಾರಿಣಿಯು ಮುಕ್ತಕಂಠದಿಂದ ಹೊಗಳುತ್ತಿದ್ದಳು. ಅಧಿಕಾರಿಣಿಯ "ಮನೆಯ ಮಗಳು" ಈ ಬಾಲಿಕೆ ಸುಂದರಾ. ಎರಡು ವರ್ಷ ಏಕೆ ಸತತವಾಗಿ ಮನಸ್ಸಿಗೆ ಹಚ್ಚಿಕೊಂಡು ದುಡಿಯುತ್ತಿದ್ದ ಈ ಬಾಲಿಕೆಯನ್ನು ಎಂತಾದರೂ ಯೋಗ್ಯ ದಾರಿಗೆ ಹಚ್ಚಿ, ಮನೆಗೆ ಮುಟ್ಟಿಸಬೇಕೆಂಬ ತೀವ್ರ ಹಂಬಲದಿಂದ ಅಧಿಕಾರಿಣಿಯು ಶತಪ್ರಯತ್ನ ಮಾಡಿ ವಿಫಲಳಾಗಿದ್ದಳು. ನಮ್ಮ ಸಹೋದ್ಯೋಗಿನಿ ಅತಿ ಶಿಸ್ತಿನ ಹೆಣ್ಣುಮಗಳು. ಅಧಿಕಾರವನ್ನು

ಅಧಿಕಾರಿಯಾಗಿಯೇ ಉಪಯೋಗಿಸುವ ಸಂಪ್ರದಾಯದ ಧರ್ಮದಲ್ಲಿ ಹುಟ್ಟಿ ಬೆಳೆದವಳು. ಈ ಬಾಲಿಕೆಯ ಪ್ರಕರಣವು ಅವಳ ಎದೆಯನ್ನು ಅರಳಿಸಿ ಅಧಿಕಾರವನ್ನು ಹಿಂದೆ ಸರಿಸಿದ್ದಿತು.

ಕೊನೆಗೆ ನನ್ನ ಕಡೆಗೆ ಈ ಪ್ರಕರಣವನ್ನು ತೆಗೆದುಕೊಂಡು ಸಹಕರಿಸಬೇಕೆಂದು ಅಧಿಕಾರಿಣಿ ಬಂದಳು. ಬಾಲಿಕೆಯನ್ನು ಕರೆಯಿಸಿ, ಅಧಿಕಾರಿಣಿಯ ಕಡೆಯಿಂದಲೇ ಬಾಲಿಕೆಯ ಪುನಃ ಸಂಕ್ಷಿಪ್ತ ವಿಚಾರಣೆಯೊಂದಿಗೆ ಕೆಲವು ವಿಷಯಗಳ ಬಗೆಗೆ ಕಂಡ ಸಂದೇಹಗಳನ್ನು ನಿವಾರಣೆ ಮಾಡಿಕೊಂಡೆನು ಚರ್ಚೆಮಾಡಿ ಮತ್ತೆ ಕೆಲವು ಹೊಸ ವಿಷಯ ಕೂಡಿಸಿ ಕೊಂಡೆನು. ಕೊನೆಯ ಒಂದೇ ಒಂದು ಅಸ್ತ್ರವನ್ನು ಅಧಿಕಾರಿಣಿಯು ಉಪಯೋಗಿಸಿದ್ದಿಲ್ಲ. ಸ್ವಾಭಿಮಾನದಿಂದ. ತನ್ನಲ್ಲಿ ವಿಚಾರಣೆಗಿರುವ ಬಾಲಿಕೆಯರೆದುರು ಅಧಿಕಾರಿಣಿ ಹಾಗೆ ನಡೆದುಕೊಳ್ಳುವದು ಸಾಧ್ಯವೇ ? ತಲೆ ಕೊಡಹಿ, ಇಷ್ಟು ಸಮಯ ಮುಂದೆ ದೂಡಿದ್ದೆಂದು ನಾವನ್ನಬಹುದಾದರೂ ಇಷ್ಟು ಸಮಯದ ಅನಂತರವೇ ಈ ಅಸ್ತ್ರದ ಉಪಯೋಗವೆಂದೂ ನಾವು ಅನುಭವದಿಂದ ಹೇಳಬಹುದು. ನಾನು ತಿಳಿಸಿದ ಅಸ್ತ್ರವನ್ನು ಉಪಯೋಗಿಸಲು ಸಿದ್ಧಳಾಗಿ ನನ್ನೆದುರು ಹಸನ್ಮುಖಳಾಗಿ ನಿಂತ ಅಧಿಕಾರಿಣಿಗೆ, ಈ ಹಸನ್ಮುಖದ ಮೇಲೆ ನಟನೆಯ ಚಿಂತಾಕ್ರಾಂತ ಪರದೆಯನ್ನೆಳೆಯುವದರ ಅವಶ್ಯಕತೆಯನ್ನು ಸಕಾಲದಲ್ಲಿ ತಿಳಿಸಿ, ತಿದ್ದಿ ಸಜ್ಜುಗೊಳಿಸಿ ಮುಂದಿನ ಕಾರ್ಯಕ್ಕೆ ಅವಳನ್ನು ಕಳುಹಿಸಿದ್ದೆನು. ಆ ಅಸ್ತ್ರ ಪರಿಣಾಮಕಾರಿಯಾಗಿ ನಾಟಿತ್ತು. ಅದರಿಂದಲೇ ಅಧಿಕಾರಿಣಿಗೆ ಸುಂದರಾಳ ತಾಯ್ತಂದೆಯರ ವಿಳಾಸ ಗೊತ್ತಾದುದು. ಆ ಅಸ್ತ್ರ ಬೇರಾವುದಿಲ್ಲ. ನಮಗೆ ನಿಮಗೆ ಆಗಾಗ ಕಣ್ಣಿಗೆ ಬೀಳುತ್ತಿರುವ "ಅಶ್ರುಕಪೋಲಾಸ್ತ್ರ." ಅಧಿಕಾರಿಣಿ ಎರಡು ದಿನ ಕಟೆದು ಕಟೆದು ಕೇಳಿ ಬೇಸತ್ತವಳಂತೆ ನಟಿಸಿ, ಕೊನೆಯುಸಿರು ಬಿಟ್ಟು "ನಾನೆಷ್ಟು ನನ್ನವಳೆಂದು ಹಚ್ಚಿಕೊಂಡರೂ ನನ್ನಲ್ಲಿ ಗುಟ್ಟು ಕೊಡಲಿಲ್ಲ........ನನ್ನ ಕೈಗಳು ಯಾರಿಗೆ ಎಷ್ಟು ಉಪಕಾರ ಮಾಡಿದ್ದರೂ ಇಷ್ಟೇ....ಅವು ಅದೃಷ್ಟ ಹೀನ ಕೈಗಳು...." ಹಾಗೆ....ಹೀಗೆ....ಎಂದು ಬಣ್ಣದ ಬಣ್ಣಾಚಾರದಿಂದ ಅತಿ ಪ್ರಯಾಸದಿಂದ ಕಣ್ಣಿನಲ್ಲಿ ಅಧಿಕಾರಿಣಿ ನೀರು ತರಬೇಕಾದರೆ "ನೆಲ ಮುಗಿಲು ಏಕಾಯಿತು."

ಅಧಿಕಾರಿಣಿ ಕಾಲೇಜಿನಲ್ಲಿದ್ದಾಗ ವಾರ್ಷಿಕೋತ್ಸವದ ನಾಟಕಗಳಲ್ಲಿ ಪಾತ್ರ ತೆಗೆದುಕೊಂಡಿದ್ದುದು ಈಗ ಉಪಯೋಗವಾಯಿತು ಎಂದು ನಾವು ಹೇಳಿ ನಮ್ಮ ಸಹೋದ್ಯೋಗಿನಿಯನ್ನು ಮೂದಲಿಸುತ್ತಿದ್ದೆವು. ನಾವು ಮೂದಲಿಸಿದರೆಷ್ಟು ಬಿಟ್ಟರೆಷ್ಟು. ತಾನೊಂದು ಹಿಡಿದ ಕಾರ್ಯದಲ್ಲಿ ಹೆಸರು ಪಡೆದಳೆಂದು ಅಧಿಕಾರಿಣಿಯ ಉಲ್ಲಾಸಕ್ಕೆ ಎಣೆಯಿಲ್ಲದಂತಾಯಿತು.

## (೧೧)

ನಮ್ಮ ಅಧಿಕಾರಿಣಿಯ ಉಲ್ಲಾಸವು ನ್ಯಾಯಾಲಯದಲ್ಲಿ ಸುಂದರಾಳ ಪ್ರಕರಣವು ವಿಚಾರಣೆಗೆ ಬಂದು, ಆ ಬಾಲಿಕೆಯು ನ್ಯಾಯಾಧೀಶರಿಗೆ ಮೊರೆ ಹೋಗುವ ತನಕ ಉಕ್ಕುತ್ತಲೇ ಇತ್ತು. ಆ ಸಾಧುವಿನನ್ನು ಒಳಗೆ ತರಲು ಅಪ್ಪಣೆಯಿತ್ತುದರ ಪರಿಣಾಮವಾಗಿ ಬಾಲಿಕೆ ಸುಂದರಾಳಲ್ಲಿ ಆದ ಪರಿವರ್ತನೆಯಿಂದ ನಮ್ಮ ಸಹೋದ್ಯೋಗಿ ಅಧಿಕಾರಿಣಿಯ ಉಲ್ಲಾಸ ಸರ್ರನೆ ಬತ್ತಿಹೋಗಿ ಮುಖ ನಿಸ್ತೇಜವಾಗಿ ಬೆವರೊಡೆಯ ಹತ್ತಿತು. ನಾನು ಈ ಸ್ಥಿತ್ಯಂತರಗಳನ್ನು ಸೂಕ್ಷ್ಮ ಅವಲೋಕನೆಗೈಯುತ್ತ ಸುಮ್ಮನಿದ್ದೆನು. ನಮ್ಮ ಸಹೋ-ದ್ಯೋಗಿಸಿಗೆ ದಿಕ್ಕು ತೋಚದಂತಾಗಿ ಸ್ವಾಭಾವಿಕವಾಗಿ ಸಹಕಾರ್ಯಕರ್ತರಾದ ನಮ್ಮ ಕಡೆಗೆ ತಿರುಗಿದಳು. ಅಧಿಕಾರಿಣಿಯ ನೋಟದಲ್ಲಿ ಸಹಾಯದ, ಸಹಕಾರದ ಕೋರಿಕೆಯಿತ್ತು.

ಇಷ್ಟರಲ್ಲಿ ನಾನು ಕಾರ್ಯಪ್ರವೃತ್ತನಾಗಿದ್ದೆ. ನಮ್ಮ ಸಹಾಯಕರು ಆಗಲೇ ಪರಿಸ್ಥಿತಿಯ ಪರೀಕ್ಷಣೆಗೆ, ಹೊರಗೆ ನಿಂತಿದ್ದ ಸಾಧುವಿನ ಗುಂಪಿನಲ್ಲಿ ಬೆರೆತು, ನನಗೆ ಅವಶ್ಯವಿದ್ದ ವಿಷಯ ಸಂಗ್ರಹ ಮಾಡಿಕೊಂಡು ಬಂದಿದ್ದರು. ಎಷ್ಟೇ ಧೈರ್ಯವನ್ನು ಈ ನಿರೀಕ್ಷಣೆಯು ನನಗೆ ತಂದುಕೊಟ್ಟರೂ ನನಗೂ "ಎದೆಯಲ್ಲಿ ಎದೆಯಿರಲಿಲ್ಲ." ಈ ಬಾಲಕ-ಬಾಲಿಕೆಯರ ಚರಿತ್ರೆಗಳು ಅತಿ ವಿಚಿತ್ರ. ಯಾವ ಹೊತ್ತಿನಲ್ಲಿ ಯಾವ ರೀತಿಯ ಬಣ್ಣವನ್ನು ಇವು ತಳೆ

ಯುವವೆಂಬುದನ್ನು ಹೇಳುವದು ಎಂತಹ ಪರಿಣತನಿಗೂ ಸಾಧ್ಯವಾಗದ ಮಾತು. ಒಮ್ಮೆ ಈ ಮಕ್ಕಳು ತಮ್ಮ ಮನಸ್ಸಿನಲ್ಲಿ ಒಂದು ನಿರ್ಧಾರಕ್ಕೆ ಬಂದರೆ ಅವರೆಂದಿಗೂ ತಮ್ಮ ನಿರ್ಧಾರದಿಂದ ಚಲಿತರಾಗುವದಿಲ್ಲ. ಈ ಚಂಚಲ ಬುದ್ಧಿಯ ಮಕ್ಕಳ ಈ ನಿರ್ಧಾರದ ನಡವಳಿಕೆಗೆ ಹಗುರಾಗಿ ಭಾಷ್ಯ ಬರೆಯುವುದೆಂದರೆ, ಯಾವ ಕಾಲಕ್ಕೆ ನಮ್ಮ ಯೋಜನೆಯ ರಥ ಚಕ್ರಗಳು ಬುಡಮೇಲಾಗುವವೆಂಬುದನ್ನು ಹೇಳಲಿಕ್ಕಾಗದೆಂಬುದನ್ನು ಒಪ್ಪಿಕೊಂಡ ಹಾಗೆಯೇ. ಸ್ತ್ರೀಯರ ಚರಿತ್ರೆ, ಪುರುಷರ ಭಾಗ್ಯ ದೇವರಿಗೇ ಗೊತ್ತಾಗುವದಿಲ್ಲ. ಇನ್ನು ಮನುಷ್ಯನಿಗೆಲ್ಲಿಯದು ? ಎಂದಿದ್ದಾರೆ ಸಂಸ್ಕೃತ ಕವಿಗಳು. ಆ ಕವಿಗಳಿಗೆ ಈ ಚಿಕ್ಕ ಬಾಲಕ-ಬಾಲಿಕೆಯರ ಜೀವನ ಸಮಸ್ಯೆಗಳನ್ನು ಎದುರಿಸುವ ಪ್ರಸಂಗ ಬಂದಿದ್ದರೆ, ಹಸುಮಕ್ಕಳ ಚರಿತ್ರೆ, ಭಾಗ್ಯ ಇವುಗಳನ್ನು ಅರ್ಥಮಾಡಿಕೊಳ್ಳುವ ಅರಿತುಕೊಳ್ಳುವ ಭಾಗ್ಯಶಾಲಿಯು, ಈ ಜಗತ್ತಿನಲ್ಲಿ ದೇವಾಂಶ ಸಂಭೂತನೆಂದೇ ಬಣ್ಣಿಸುತ್ತಿದ್ದರು-

ಅದಿರಲಿ, ಈ ಬಾಲಿಕೆಗೆ ಈ ಸಾಧುವಿನ ಹೆಸರು ಇಷ್ಟೇಕೆ ಭಯಂಕರವಾಗಿರಬೇಕು. ಈ ಸಾಧುವೇ ನಮ್ಮ ಹರಪ್ರಸಾದನ ಆಗುಹೋಗುಗಳಲ್ಲಿ ಆಸ್ಥೆಯುಳ್ಳವನು. ಈ ಬಾಲಿಕೆಗೆ ಇವನ ಸಂಬಂಧವೆಂತಿರಬೇಕು. ನ್ಯಾಯಾಧೀಶರು ಸೂಚಿಸಿದಂತೆ ಈ ಕಲಕು ಮಲಕು ಇನ್ನಾವುದೋ ಕಗ್ಗಂಟಿನ ಮಲಕು ಬಿಚ್ಚಲು ಸಹಕಾರಿಯಾಗಬಹುದೇನೋ ಎಂಬ ವಿಚಾರದಿಂದ ನಾನೂ ಸ್ವಲ್ಪ ಮಿದುಳು ಕಾಯಿಸಿಕೊಂಡೆನು. ನನಗೆ ಈ ಹುಡುಗಿಯ ಮುಂದಿನ ಹೇಳಿಕೆಯಿಂದ ಹೆಚ್ಚಿನ ಪರಿಜ್ಞಾನ ಪಡೆಯುವ ಆತುರವು ಹೆಚ್ಚಿತು. ನಮ್ಮ ಅಧಿಕಾರೀ ವರ್ಗವು ಇಂತು ವಿಚಾರದ ಹೋರಾಟದಲ್ಲಿರುವಾಗ ಆ ಬಾಲಿಕೆ ಸುಂದರಾಳು ಇತ್ತ ಹೇಳಿಕೆಗಳು ಎಲ್ಲವೂ ಅಪೂರ್ಣ. ಮಾತಿಗಿಂತ ಆವಳ ಅಳುವೇ ಹೆಚ್ಚಾಗಿತ್ತು. ಅವಳು ಒಂದೆರಡು ಶಬ್ದ ನುಡಿದು, ಮೈಯೆಲ್ಲ ನಡುಗಿಸಿ ಉದ್ವೇಗದಿಂದ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಹದಿನೈದು ನಿಮಿಷಗಳಲ್ಲಿ ಅವಳು ಆಡಿದ ಮಾತುಗಳು ಒಟ್ಟು ಹತ್ತು. "ತಂದೆ....ಅಂತಿದ್ದೀರಿ.... ನಾನು....ಅನಾಥಳು......ನೀವೇ......ರಕ್ಷಿಸಬೇಕು....ನಾನು ಹೇಳುವದು........ ಇನ್ನೂ....ಬಹಳವಿದೆ."

ಅವಳ ಈ ಮಾತುಗಳಿಂದ ನಾನು ಒಂದು ನಿರ್ಧಾರಕ್ಕೆ ಬಂದೆನು. ಅವಳು ಅಧಿಕಾರಿಣಿಯ ಎದುರು ಇತ್ತ ವಿವರಣೆ ಇನ್ನೂ ಪೂರ್ಣವಾಗಿಲ್ಲ. ಸುಂದರಾಳಿಗೆ ಇನ್ನೂ ತನ್ನ ಚರಿತ್ರೆಯಲ್ಲಿ ನಡೆದ ಘಟನೆಗಳ ಬಗೆಗೆ ಹೇಳುವದಿದೆ. ಈ ಸಾಧುವನ್ನು ಸಂಧಿಸಿದರೆ ( Confront ) ಎಷ್ಟೋ ನಮಗೆ ಗೊತ್ತಿಲ್ಲದ ವಿಷಯಗಳು ಆ ಸಾಧುವಿನಿಂದ ಅನಾಯಾಸವಾಗಿ ದೊರೆಯಬಹುದು. ಇಂತು ವಿಚಾರಿಸಿ ನಾನು ನ್ಯಾಯಾಲಯದ ಅಪ್ಪಣೆ ಕೋರಿದೆನು ನನ್ನ ಹೇಳಿಕೆಯನ್ನು ಕೇಳಿಕೊಳ್ಳಲು ನ್ಯಾಯಾಲಯದವರು ಆಕ್ಷರಿಯಿಂದ ನನಗೆ ಅಪ್ಪಣೆಯಿತ್ತರು. "ಈ ಬಾಲಿಕೆಗೆ ನ್ಯಾಯಾಲಯು ಅಭಯವನ್ನು ದಯಪಾಲಿಸಬೇಕು. ಅರ್ಧ ಘಂಟೆ ಈ ಪ್ರಕರಣವನ್ನು ಮುಂದಕ್ಕೆ ಹಾಕಿ, ಉಳಿದ ಇನ್ನೊಬ್ಬ ಚಿಕ್ಕ ಬಾಲಕನ ಪ್ರಕರಣವನ್ನು ಎತ್ತಿಕೊಂಡು ವಿಚಾರಿಸಬೇಕು. ಅಷ್ಟು ಸಮಯ ನನಗೆ ನ್ಯಾಯಾಲಯದಲ್ಲಿ ಉಪಸ್ಥಿತನಿಲ್ಲದಿರಲು ಅಪ್ಪಣೆಯನ್ನೀಯಬೇಕು. ನಾನು ಈ ಎಲ್ಲ ಸೂಚನೆಗಳಿಗೆ ನ್ಯಾಯಾಲಯವನ್ನು ಪುನಃ ಪ್ರವೇಶಿಸುವಾಗ ಸಬಲ ಕಾರಣಗಳನ್ನು ತಂದೊಪ್ಪಿಸುವೆನು.''

ನನ್ನ ಈ ಎಲ್ಲ ಹೇಳಿಕೆಯನ್ನು ಕೇಳಿಕೊಂಡು ಅವಶ್ಯವಿದ್ದ ಅನುಮತಿಯನ್ನಿತ್ತರು. ನಾನು ನ್ಯಾಯಾಲಯದಿಂದ ಹೊರಬಂದು ನನ್ನ ಸಹಾಯಕರನ್ನು ಕರೆಯಿಸಿಕೊಂಡೆನು. ಸುಂದರಾಳ ಪ್ರಕರಣದ ಕಾಗದ ಪತ್ರಗಳನ್ನು ಅಧಿಕಾರಿಣಿಯಿಂದ ತರಿಸಿಕೊಂಡೆನು. ಇನ್ನೊಬ್ಬ ಅಧಿಕಾರಿಗೆ ಆ ಚಿಕ್ಕ ಬಾಲಕನ ಕಾಗದಗಳನ್ನು (ಸೂಚನೆಗಳೊಂದಿಗೆ) ಒಪ್ಪಿಸಿ, ಅಧಿಕಾರಿಣಿಯೂ ನ್ಯಾಯಾಲಯದ ಅಪ್ಪಣೆ ಪಡೆದು, ನನ್ನ ಕಡೆಗೆ ಬಂದಳು.

ಅಷ್ಟರಲ್ಲಿ ನಾನು ಸುಂದರಾಳ ಪ್ರಕರಣದ ಅಭ್ಯಾಸವನ್ನು ವಿಹಂಗಮ ನೋಟದಿಂದ ಮುಗಿಸಿದ್ದೆನು. ಅಧಿಕಾರಿಣಿಯು ಬಂದ ಕೂಡಲೇ, ಮೊದಲನೆಯದಾಗಿ ಅವಳಿಗೆ ಧೈರ್ಯದಿಂದಿರಲು ಹೇಳಿದೆನು. ಸುಂದರಾಳನ್ನು ಕರೆಯಿಸಿ ಪುನಃ ವಿಚಾರಿಸುವದೇ ಹೇಗೆಂದು ಅಧಿಕಾರಿಣಿಯು ನನಗೆ ಕೇಳಿದಳು. ಈಗಿದ್ದ ಪರಿಸ್ಥಿತಿಯಲ್ಲಿ ಯಾವ ಸ್ಥಾನಪಲ್ಲಟವನ್ನೂ ಮಾಡುವ ಅವಶ್ಯಕತೆ

ನನಗೆ ಕಂಡುಬಂದಿಲ್ಲವೆಂದು ನಾನು ಸ್ಪಷ್ಟವಾಗಿ ಅಧಿಕಾರಿಣಿಗೆ ತಿಳಿಸಿದೆನು, ಅವಳ ಕಾಗದ ಪತ್ರಗಳಿಂದ ನನಗೆ ಧೈರ್ಯ ಬಂದಿದೆಯೆಂಬುದನ್ನೂ ತಿಳಿಸಿದೆನು.

ನನ್ನ ಸಹಾಯಕ ಬಸವಂತನಿಗೆ ಕರೆದು ಮುಂದಿನ ಸಲಹೆಯನ್ನಿತ್ತೆನು: ''ನೀನು ನಿನ್ನ ಮಿತ್ರನನ್ನು ಕರೆದುಕೊಂಡು ಆ ಸಾಧುವಿನ ಬದಿಯಲ್ಲಿ ನಿಂತು ಒಂದು ವಾದವನ್ನು ಪ್ರಾರಂಭಿಸಬೇಕು. 'ಸುಂದರಾ' ಎಂಬ ಶಬ್ದ ಒಮ್ಮೆ ಆ ಸಾಧುವಿಗೆ ಸ್ಪಷ್ಟ ಕೇಳಿಸುವಂತೆ ಮಾತನಾಡಬೇಕು. ಉಳಿದ ಎಲ್ಲ ಮಾತುಗಳೂ ಜೊಳ್ಳು ಕೇವಲ ತುಟಿಗಳ ಪಿಟಿ ಪಿಟಿ ಕಿವಿಗಳ ಕಡಿದಾಟವಿರಬೇಕು. ''ಸುಂದರಾ'' ಶಬ್ದ ಸಾಧುವಿನ ಕಿವಿಗೆ ಬಿದ್ದಾಗ ಅವನ ಮುಖ ಮುದ್ರೆಯಲ್ಲಾಗುವ ಅದಲು-ಬದಲು, ಅವನು ನಿಮ್ಮೊಡನೆ ಸಂಬಂಧ ಬೆಳೆಸಲು ಮಾಡುವ ಪ್ರಯತ್ನ, ನೀವು ಈ ವಿಷಯದಲ್ಲಿ ತೋರಿಸುವ ಔದಾಸೀನ್ಯದಿಂದ ಅವನಲ್ಲಾಗುವ ಪ್ರತಿಕ್ರಿಯೆ, ಇವೆಲ್ಲವುಗಳನ್ನು ಹತ್ತು ನಿಮಿಷಗಳಲ್ಲಿ ನಮಗೆ ತಿಳಿಸಬೇಕು.

ಬಸವಂತನು ತನ್ನ ಮಿತ್ರನೊಂದಿಗೆ ಕಾರ್ಯಸ್ಥಳಕ್ಕೆ ಹೋದನು. ನಮ್ಮ ಅಧಿಕಾರಿಣಿಗೆ ಅವಳ ಕಾಗದ ಪತ್ರಗಳಲ್ಲಿಯೇ ಇದ್ದ ಒಂದು ಹೆಸರು, ಒಂದು ಸನ್ನಿವೇಶ, ಒಂದು ಘಟನೆಯನ್ನು ಕೆಳಗೆ ಗೆರೆ ಎಳೆದು ತೋರಿಸಿದಾಗ ಅವಳ ಮುಖದಲ್ಲಿ ಆನಂದ ಉಕ್ಕಿತು. ಕಣ್ಣು ಆನಂದದಿಂದ ತುಂಬಿ ಉಕ್ಕಿದವು.

ಅರೆಕ್ಷಣದಲ್ಲಿ ತನ್ನ ಅಲಕ್ಷ್ಯಕ್ಕೆ ಮರುಗಿದಳು. ನಿನ್ನೆಯ ದಿನ ಕೊನೆಯ ಸಿದ್ಧತೆಯೆಂದು ಸುಂದರಾಳನ್ನು ಪುನಃ ಪ್ರಶ್ನಿಸಿದಾಗ ಆ ಬಾಲಿಕೆ ಕೆಲವು ವಿಷಯಗಳನ್ನು ಹೊಸದಾಗಿ ಹೇಳಿದ್ದಳು. ಅಧಿಕಾರಿಣಿಯ ವಿಚಾರ ಧಾರೆ ಹಿಡಿದ ಹಾದಿಯೇ ಬೇರೆಯಾದ್ದರಿಂದ, ಸುಂದರಾಳು ಹೇಳಿದ ನಿನ್ನೆಯ ವಿಷಯಗಳಿಗೆ ಅಧಿಕಾರಿಣಿ ಅಷ್ಟು ಮಹತ್ವಕೊಡದೆ ಉದಾಸೀನ ಮಾಡಿದ್ದರ ಪರಿಣಾಮವೇ ಇಂದಿನ ನ್ಯಾಯಾಲಯದಲ್ಲಿ ನಡೆದ ಘಟನೆಗಳ ತಳಹದಿಯೆಂದು ಅಧಿಕಾರಿಣಿಗೆ ಮನವರಿಕೆ ಮಾಡಿಕೊಟ್ಟೆನು. ಅವಳು ಅದಕ್ಕೊಪ್ಪಿ

ನನ್ನ ತತ್‌ಕ್ಷಣದ ಯೋಜನೆಗಳು ಈ ಹೇಳಿಕೆಗೆ ಪುಷ್ಟಿಯನ್ನು ನಿಶ್ಚಿತ ಕೊಟ್ಟೀತೀರುವವೆಂಬುದನ್ನೂ ಒಪ್ಪಿದಳು. ನಾವು ನಮ್ಮ ಸಹಾಯಕ ಬಸವಂತನಿಗಾಗಿ ಕಾಯ್ದು ಕುಳಿತೆವು.

## [೧೨]

ಬಸವಂತನು ಒಂದು ಹೆಜ್ಜೆ ಮುಂದು ಹೋಗಿ ಕಾರ್ಯವನ್ನು ಭದ್ರಮಾಡಿ ಬಂದನು. ನಾವು ಎಣಿಸಿದಂತೆ ಅಕ್ಷರಶಃ ಚಿತ್ರವನ್ನು ನಾವು ಬಸವಂತನಿಂದ ಪಡೆಯುದಿದ್ದರೂ, ಬಹು ಅಂಶ ನಾವು ಎಣಿಕೆ ಹಾಕಿದಂತೆಯೇ ಆ ಸಾಧುವಿನ ಪ್ರತಿಕ್ರಿಯೆಗಳು ನಡೆದವೆಂಬುದನ್ನು ನಾವು ಬಸವಂತನ ವಿವರಣೆಯಿಂದ ಅರಿತುಕೊಂಡೆವು.

ಸಾಧುವಿನ ತತ್‌ಕ್ಷಣದ ಪ್ರತಿಕ್ರಿಯೆಯನ್ನು ನಾವು ಬಸವಂತನ ಮುಖದಿಂದ ನಾಲ್ಕೈದು ಬಾರಿ ಕೇಳಿಕೊಂಡೆವು. ಅಷ್ಟು ಸರಸವಾಗಿ ಪರಿಣಾಮಕಾರಿಯಾಗಿ ಯಥಾವತ್ ಚಿತ್ರವನ್ನು ಅವನು ನಮ್ಮ ಕಣ್ಮುಂದೆ ಇಟ್ಟನು. "ಸುಂದರಾ" ಎಂಬ ಶಬ್ದ ಮಾತ್ರ ಕಿವಿಗೆ ಬಿದ್ದ ಕೂಡಲೇ ಸಾಧು ಸಾವರಿಸಿಕೊಂಡು—ಅದೇಕೆ ಕೊಡಹಿಕೊಂಡು—ಎದ್ದನು. ಅವನ ಗಡ್ಡವು ಗಡಿಬಿಡಿಯಿಂದ ನಡುಗಿ ಕೆದರಿ, ಮುಖವು "ಕೆಂಜಗನ ಗೂಡಾಯಿತು." ಅವನು ಆ ಕ್ಷಣದ ತನಕ ಕಾಯ್ದುಕೊಂಡು ಬಂದಿದ್ದ ಘನತೆ ಗಾಂಭೀರ್ಯಗಳು ಹೇಳಲು ಹೆಸರಿಲ್ಲದಂತಾಗಿ, ದಿಕ್ಕಾಪಾಲಾದುದನ್ನು ಅವನ ಇಡೀ ದೇಹದ ಕಂಪನ, ಅವನ ಕೈಕಾಲುಗಳ ತತ್ತರ ಅವನ ಅಂಗಳಕ್ಕೆ ಅಂಟಿಕೊಂಡ ನಾಲಿಗೆ ಒಣಗಿದ ತುಟಿಗಳು, ಜಲಜಲನೆ ಬೆವರಿದ ಹಣೆ, ಕೊನೆಗೆ ಅತ್ತಿತ್ತ ಸುತ್ತು ಕಣ್ಣು ಹಾಕಿ ಹೊರಗೆ ಮೆಲ್ಲನೆ ಜಾರಿಕೊಳ್ಳಲು ಹವಣಿಸುತ್ತಿರುವ ಅವಕಾಶಗಳ ಹುಡುಕಾಟ ಇವೆಲ್ಲವೂ ಕೈಯೆತ್ತಿ ಸಾರುತ್ತಿದ್ದವೆಂದು ಬಸವಂತನು ಹಾವ-ಭಾವಗಳಿಂದ ವ್ಯಕ್ತಮಾಡುತ್ತಿರುವದನ್ನು ಕಂಡವರೇ ಮಾತ್ರ "ಕಣ್ಣು ಪ್ರೀತಿ

ಕಳೆದುಕೊಳ್ಳುವದು" ಸಾಧ್ಯ. ಬಸವಂತನ ಜಾಣ್ಮೆಯ ವಿಷಯದಲ್ಲಿ ಹೇಳುವಾಗ, ಆತ ಒಂದು ಹೆಜ್ಜೆ ಮುಂದೆ ಹೋದನೆಂದು ನಾನು ಹಿಂದೆ ಹೇಳಿರುವೆನಷ್ಟೆ. ಅದನ್ನೇ ನಾವು ಅವನಲ್ಲಿ ಹೆಚ್ಚಾಗಿ ಮೆಚ್ಚಿಕೊಂಡಿರುವದು.

ಸಾಧುವಿಗೆ ಇವರನ್ನು ಎಂತಾದರೂ ಪ್ರಶ್ನಿಸಿ, ಸುಂದರಾಳ ವಿಷಯವಾಗಿ ಹೆಚ್ಚು ತಿಳಿದುಕೊಳ್ಳುವ ಆತುರವಾದರೋ ವಿಪರೀತವಿದ್ದರೂ, ನೇರವಾಗಿ ಕೇಳಿದರೆಂತೊ ಎಂಬ ಅಧೈರ್ಯ ಹೆಚ್ಚಾಗಿ, ಅವನಿಗೆ ಧರ್ಮಸಂಕಟ—(ಎಲ್ಲಿಯ ಧರ್ಮ ಆ ಸಾಧುವಿಗೆ,)—ಬಂದು, ಎಲ್ಲಿಯ ಸುಂದರಾ, ಎಲ್ಲಿಯ ಮಾತು, ಸದ್ಯ ಎತ್ತಾದರೂ ಈ ಪ್ರಾಣಸಂಕಟದಿಂದ ಪಾರಾದರೆ ಸಾಕೆಂಬ "ಜೀವಗಳ್ಳತನದ" ಆತ್ಮಾಶೆ ಮೂಡಿದ್ದುದನ್ನು ನಮ್ಮ ಬಸವಂತನು ಕಂಡುಕೊಂಡನು. ಈ ಸಾಧುವನ್ನು ಇಷ್ಟು ಹಗುರಾಗಿ ಅನಾಯಾಸವಾಗಿ ಈ "ಧರ್ಮಕಾರ್ಯ"ದಿಂದ ಮುಕ್ತನನ್ನಾಗಿ ಮಾಡಲು ನಮ್ಮವರು ಮನಸ್ಸು ಮಾಡುವರೇ ? ತನ್ನೊಂದಿಗೆ ಬಂದಿದ್ದ ಇನ್ನೊಬ್ಬ ಸಹಾಯಕನಿಗೆ ಬದಿಗೆ ಕರೆದು, ಆ ಸಾಧುವಿನ ಮೇಲೆ ಕಣ್ಣಿರಿಸಿಕೊಂಡಿರಬೇಕೆಂದು ಆ ಸಾಧುವಿಗೆ ಗೊತ್ತಾಗುವಂತೆ ಸೂಚನೆ ಕೊಟ್ಟುದಲ್ಲದೆ, ನಿತ್ಯದಂತೆ ನ್ಯಾಯಾಲಯಕ್ಕೆ ಬಂದ ಸಮವಸ್ತ್ರದಲ್ಲಿರದ ಸಾದಾ ಉಡುಪಿನ ಪೋಲೀಸ ಕಾವಲಿನವನಿಗೆ ಈ ಕಾರ್ಯದಲ್ಲಿ ಸಹಕಾರಿಯಾಗಲೂ ತಿಳಿಸಿ, ಬಸವಂತನು ನಮ್ಮ ಕಡೆಗೆ ನಡೆದ ಸಂಗತಿಗಳನ್ನು ತಿಳಿಸಲು ಧಾವಿಸಿದ್ದನು. ಅತ್ತ ನ್ಯಾಯಾಲಯದೊಳಗೆ ಆ ಚಿಕ್ಕ ಬಾಲಕನ ಪ್ರಕರಣವು ವಿಚಾರಣೆಗೆ ಬಂದು ಮುಗಿಯಬಂದಿದೆಯೆಂಬ ಸೂಚನೆಯೂ ನಮಗೆ ಬಂದದ್ದರಿಂದ, ಅಧಿಕಾರಿಣಿಯನ್ನು ಕೆಲವು ಸೂಚನೆಗಳೊಂದಿಗೆ ನ್ಯಾಯಾಲಯಕ್ಕೆ ಕಳುಹಿಸಿ ನಾನು ಆ ಸುಂದರಾಳನ್ನು ಕರೆಕಳುಹಿದೆನು.

ಸಾಧುವಿನ ಮತ್ತು ಸುಂದರಾಳ ಪ್ರಕರಣದ ಸಂಬಂಧದಿಂದ ನಾನು ಒಂದು ಲಾಭದಾಯಕ ಪರಿಣಾಮವನ್ನು ಪಡೆಯಬೇಕೆಂದು ನಿರ್ಧರಿಸಿ ಮುಂದಿನ ಕಾರ್ಯಕ್ಕೆ ಸುಂದರಾಳನ್ನು ಸಿದ್ಧಗೊಳಿಸಿ, ಬಸವಂತನಿಗೆ ನನ್ನ ವಿಚಾರವನ್ನು ತಿಳಿಸಿ, ಇದರಲ್ಲಿ ಅವನು ಆಡಬೇಕಾದ ಪಾತ್ರವನ್ನು ತಿಳಿಸಿಕೊಟ್ಟೆನು. ನಮ್ಮ ಕೊಠಡಿಯಿಂದ ನ್ಯಾಯಾಲಯಕ್ಕೆ ಹೋಗಲು

ಎರಡು ಮಾರ್ಗಗಳು ಇರುವದು—(ಸಾರ್ವಜನಿಕರಿಗಾಗಿ ಒಂದು, ಅಧಿಕಾರಿಗಳಿಗಾಗಿ ಒಂದು)—ಸೌಕರ್ಯವೇ ! ನ್ಯಾಯಾಲಯವು ಮಕ್ಕಳ ವಸತಿ ಗೃಹದಲ್ಲಿಯೇ ಇರುವ ವಿಶಾಲವಾದ ಕೆಳ ಭಾಗದ ಭವನದಲ್ಲಿ ನಡೆಯುವದು. ಅಧಿಕಾರಿಗಳ ಕಾರ್ಯಾಲಯಗಳು ನ್ಯಾಯಾಲಯದ ಎಡ-ಬಲ ಭಾಗಗಳಲ್ಲಿ ಅದೇ ಕಟ್ಟಡದಲ್ಲಿರುವವು. ನಾವು—ಬಸವಂತ, ಸುಂದರಾ ಮತ್ತು ನಾನು—ನ್ಯಾಯಾಲಯವನ್ನು ಹೊರಗಿನ ಬಾಗಿಲಿನಿಂದ ಪ್ರವೇಶಿಸುವದು; ಸುಂದರಾ, ಅತ್ತಿತ್ತ ಹೊರಳಿ ನೋಡದೆ, ಉಗ್ರಮುಖಿಯಾಗಿ ಬಸವಂತನ ಹಿಂದೆ ನ್ಯಾಯಾಲಯವನ್ನು ಪ್ರವೇಶಿಸಬೇಕು; ಆವಳು ಒಳಗೆ ಹೋದ ಮೇಲೆ ಬಸವಂತನು ಬಾಗಿಲಲ್ಲಿಯೇ ಕಾಯ್ದು ನಿಂತು, ನನಗಾಗಿ ದಾರಿ ಮಾಡಿಕೊಡುತ್ತಿರಬೇಕು. ಇಷ್ಟು ತಾತ್ಕಾಲಿಕ ಸೂಚನೆಗಳನ್ನಿತ್ತು ಬಸವಂತನೊಡನೆ ಸುಂದರಾಳನ್ನು ಕಳಿಸಿ, ಹಿಂದಿನಿಂದ ನಾನು ಹೊರಟೆನು. ಇದೆಲ್ಲವೂ ನಡೆದದ್ದು ಐದಾರು ನಿಮಿಷಗಳಲ್ಲಿ.

ಮೊದಲೇ ಬಲೆಯಲ್ಲಿ ಸಿಕ್ಕು ಬಿದ್ದ ಪ್ರಾಣಿಯಂತೆ, ಮೇಲುಸಿರು ಕೆಳ ಉಸಿರು ಮಾಡಿಕೊಂಡು ನಿಂತಿದ್ದ ಸಾಧುವಿನ ಗಡ್ಡದಿಂದ ತಟತಟನೆ, ಬೆವರು ಹನಿಗಳು ಉದುರುತ್ತಿದ್ದವು. ಉಗ್ರಕಾಳಿಯಂತೆ ಸುಂದರಾಳು ನ್ಯಾಯಾಲಯದ ಬಾಗಿಲ ಸಮೀಪ ಬಂದಾಗ ಸಾಧುವಿನ ಬಾಯಿಯು ಉಸಿರಾಟದ ತೀವ್ರತೆಯಿಂದ ಒಣಗು ಗಟ್ಟಿತು—ವೇಗದಿಂದೋಡುವ ಕುದುರೆಯಂತೆ. ಸುಂದರಾಳನ್ನು ಒಳಗೆ ಬಿಟ್ಟು, ಬಸವಂತನು ನನಗಾಗಿ ದಾರಿ ಮಾಡಿದನು. ನಾನು ಇನ್ನು ಒಳಗೆ ಹೆಜ್ಜೆ ಇಡುವವನಿದ್ದೆನು. "ಮಹಾರಾಜ !........" ಎಂದು ಸಾಧು ಮುಂದೆ ಬಂದನು. ಅರಿಯದವನಂತೆ ನಾನು ಅವನ ಕಡೆಗೆ ನೋಡಿದೆನು. "ಒಂದೇ ಒಂದು ಮಾತು ಹೇಳುವದಿದೆ'', ಎಂದು ಹಿಂದಿಯಲ್ಲಿ ನನಗೆ ಹೇಳಿದನು. "ಈಗ ಈ ಎಲ್ಲ ಪರಿಪಾಠಗಳ ಸಮಯ ಮುಗಿದು ಹೋಗಿದೆ ಏನು ಹೇಳುವದನ್ನೂ, ಒಂದೂ ಸತ್ಯ ಸಂಗತಿಯನ್ನೂ ಮುಚ್ಚಿಡದೆ ನ್ಯಾಯಾಲಯದೆದುರು ನಿನ್ನ ದೇವರನ್ನು ಸ್ಮರಿಸಿ ಹೇಳಿದರೆ ಮಾತ್ರ ನೀನು ಸುಖ ಪಡೆಯಬಹುದು" ಎಂದು ನಾನು ಅವನಿಗೆ ಹಿಂದಿಯಲ್ಲಿಯೇ ಉತ್ತರ ಕೊಟ್ಟೆನು. "ಅವಶ್ಯ—ಅವಶ್ಯ. ನಾನು ಮೊದಲಿನಿಂದ ಕೊನೆಯ ತನಕ

ಸತ್ಯವನ್ನೇ ಹೇಳುವೆನು. ಆದರೆ ನನ್ನ ಮೇಲೆ ನಿಮ್ಮ ದಯೆ ಮಾತ್ರ ಇರಬೇಕು. ನಾನು ಬಹಳ ತಪ್ಪು ಮಾಡಿದ್ದೇನೆ. ನನ್ನನ್ನು ಇದೊಂದು ಬಾರಿ ಕ್ಷಮಿಸಿ ಬಿಡಬೇಕು. ನನ್ನಿಂದ ಇನ್ನೂ ಒಂದು ಅಪರಾಧ ತಮ್ಮಲ್ಲಿರುವ ಒಬ್ಬ ಬಾಲಕನಿಗೆ ಸಂಬಂಧಿಸಿ ಘಟಿಸುವದಿತ್ತು. ಸರಕಾರದ ಕಣ್ಣು ತಪ್ಪಿಸಲು ಯಃಕಶ್ಚಿತ್ ನನ್ನಂತಹರಿಗೆ ಸಾಧ್ಯವಿಲ್ಲ—ಅದೇಕೆ ಯಾರಿಂದಲೂ ಸಾಧ್ಯವಿಲ್ಲ''—ಎಂದು ಸಾಧು ಬಡಬಡಿಸಿದನು. ನಾನು ಮಾತ್ರ ಅವನಿಗೆ ಯಾವ ಉತ್ತರವನ್ನೂ ಹೇಳದೆ, ಕಾವಲಿನವರಿಗೆ ಮಾತ್ರ. ''ನ್ಯಾಯಾಲಯವು ಈ ಮನುಷ್ಯನನ್ನು ಇದೀಗ ಕರೆಕಳುಹುವದು. ನೀವಿಬ್ಬರೂ ಅವನನ್ನು ಒಳಗೆ ತಂದು ಒಪ್ಪಿಸಬೇಕು" ಎಂದು, ಸೂಜ್ಞವಾಗಿ ಅವನ ಮೇಲೆ ಬಿಗಿಯಾದ ಕಾವಲಿಡಲು ಹೇಳಿ, ನ್ಯಾಯಾಲಯದೊಳಗೆ ಬಂದು ಕುಳಿತೆನು.

ನ್ಯಾಯಾಧೀಶರು ಅದೇ ಆಗ ಆ ಚಿಕ್ಕ ಬಾಲಕನ ಪ್ರಕರಣದ ವಿಚಾರಣೆಯನ್ನು ಮುಗಿಸಿದ್ದರು. ನಾನು ಬಂದುದನ್ನು ನ್ಯಾಯಾಲಯ ಲಕ್ಷ್ಯಕ್ಕೆ ತೆಗೆದುಕೊಂಡಿತ್ತು. ಸುಂದರಾಳ ಪ್ರಕರಣದ ವಿಚಾರಣೆಯ ಪ್ರಾರಂಭವನ್ನು ನನ್ನ ಮಾತುಗಳಿಂದಲೇ ಮಾಡಬೇಕೆಂದು ನ್ಯಾಯಾಧೀಶರ ಮತ್ತು ನನ್ನ ಸಹೋದ್ಯೋಗಿ ಅಧಿಕಾರಿಗಳ ಅಭಿಪ್ರಾಯವೆಂಬುದನ್ನು ಅವರ ಮುಖಮುದ್ರೆಗಳಿಂದ ತಿಳಿದುಕೊಂಡ ನಾನು, ಸಂಪ್ರದಾಯದಂತೆ, "ಮಾನ್ಯರೆ ಈ ಬಾಲಿಕೆಯ ವಿಷಯದಲ್ಲಿ ನ್ಯಾಯಾಲಯಕ್ಕೆ ನನ್ನ ಕೆಲವು ಸೂಚನೆಗಳನ್ನು ಮಾಡಬಯಸುತ್ತೇನೆ. ಸಂಬಂಧಿಸಿದ ನನ್ನ ಸಹೋದ್ಯೋಗಿ ಅಧಿಕಾರಿಣಿಯವರು ಮತ್ತು ಮಾನ್ಯ ನ್ಯಾಯಾಧೀಶರು ಈ ವಿಷಯದಲ್ಲಿ ನನಗೆ ಅನುಮತಿಯನ್ನು ದಯಪಾಲಿಸಬೇಕು'' ಎಂದು ಕೇಳಿದೆನು. ನ್ಯಾಯಾಧೀಶರು, "ನ್ಯಾಯಾಲಯವು ಅತಿ ಸಂತೋಷದಿಂದ ನಿಮಗೆ ಈ ಪ್ರಾಸ್ತಾವಿಕಕ್ಕೆ ಒಪ್ಪಿಗೆಯಿತ್ತಿದೆ. ಶ್ರೀಮತಿಯವರೂ ಒಪ್ಪುವರೆಂದು ನಾವು ನಂಬಿದ್ದೇವೆ,'' ಎಂದು ಅಧಿಕಾರಿಣಿಯ ಕಡೆಗೆ ನೋಡಿದರು. ಅಧಿಕಾರಿಣಿಯು ಎದ್ದು ನಿಂತು, ''ನನ್ನ ಸಹೋದ್ಯೋಗಿಗಳ ಈ ಸಹಕಾರಕ್ಕೆ ನಾನು ತುಂಬಾ ಉಪಕೃತಳು. ಅವರಿಗೆ ನನ್ನ ಅನಂತ ವಂದನೆಗಳು'' ಎಂದು ನನ್ನ ಕಡೆ ನೋಡಿ ಕುಳಿತುಕೊಂಡಳು. ನಾನು ಎದ್ದೇ ನಿಂತಿದ್ದೆನು: "ಈ ಮಾತು

ಹೇಳುವದು ಬೇಡ ನನ್ನ ಕರ್ತವ್ಯ—ಮೇಲಾಗಿ ನಾನೊಬ್ಬನೇ ಮಾಡುತ್ತಿರುವದಿಲ್ಲ. ಪ್ರತಿಯೊಬ್ಬರೂ ಇದರಲ್ಲಿ ಪಾತ್ರವಾಡುತ್ತಿದ್ದೀರಿ. ನಾನು ನಿಮ್ಮ ಕೃತಿಸಂಕಲನಕ್ಕೆ ಮುಖವಾಗುತ್ತಿದ್ದೇನಷ್ಟೇ,'' ಎಂದು ಹೇಳಿ ನ್ಯಾಯಾಲಯಕ್ಕೆ ಮುಂದಿನಂತೆ ಕೋರಿಕೆಯಿತ್ತನು: ''ಮಾನ್ಯರೆ, ಸುಂದರಾಳ ವಿಷಯದಲ್ಲಿ ಸುಂದರಾಳು ನ್ಯಾಯಾಲಯದೆದುರು ಹೇಳಿಕೆ ಕೊಡುವ ಮೊದಲು, ಸಾಧು ಮಹಾನುಭಾವರು ಹೇಳುವವೆಲ್ಲವನ್ನೂ ನ್ಯಾಯಾಲಯವು ಪೂರ್ಣ ಕೇಳಿಕೊಂಡು ಮುಂದೆ ಸಾಗುವದಕ್ಕೆ ಅಪ್ಪಣೆ ದಯಪಾಲಿಸಬೇಕು. ಅಪ್ಪಣೆಯಾದರೆ ಆ ಸಾಧುವನ್ನು ಒಳಗೆ ಕರೆಕಳುಹುವೆನು" ಎಂದೆನು. "ಅಪ್ಪಣೆ !" ಎಂದು ನ್ಯಾಯಾಧೀಶರು ಹೇಳಿದರು. ಸೂಚನೆಯಂತೆ, ಬಾಗಿಲು ತೆರೆದು, ಬಸವಂತನು ಸಾಧುವನ್ನು ಒಳಗೆ ಬಿಟ್ಟನು. ತಡವರಿಸುತ್ತ ಸಾವರಿಸುತ್ತ, ಕಣ್ಣು ಬಿಡುತ್ತ ಸಾಧುವು ಒಳಬಂದು ನಮಸ್ಕರಿಸಿ ನಿಂತನು

ನ್ಯಾಯಾಧೀಶರ ಸೂಚನೆಯಂತೆ ಸುಂದರಾಳನ್ನು ಒಳಗೆ ಕಳಿಸ—ಲಾಯಿತು. ಸಾಧುವಿನ ಹೇಳಿಕೆಯನ್ನು ಸುಂದರಾಳು ಕೇಳುವದು ಅಷ್ಟು ಸಮಂಜಸವಲ್ಲವೆಂದು. ಕೆಲವು ಮಹತ್ವದ ಅಂಶಗಳನ್ನು ಗಮನಕ್ಕೆ ತೆಗೆದುಕೊಂಡು ಯೋಗ್ಯ ಪರಿಸ್ಥಿತಿಯನ್ನು ನಿರ್ಮಿಸಿದ ಅನಂತರವೇ ಮಕ್ಕಳ ವಿಚಾರಣೆಯು ಪ್ರಾರಂಭ ಮಾಡುವ ಒಳ್ಳೆಯ ಪರಿಪಾಠವಿದೆ. ಪ್ರೌಢರ ವಿಚಾರಗಳನ್ನು ಮಕ್ಕಳೆದುರು ಇಟ್ಟು ತೊಡಕು ಮಾಡುವದಂತೂ ದೂರ ಉಳಿಯಿತು.

[೧೩]

ನ್ಯಾಯಾಲಯ ಈ ಸಮಯಕ್ಕೆ ವಾಸ್ತವಿಕವಾಗಿ ಕೊನೆಗೊಳ್ಳಬೇಕಾಗಿತ್ತು. ಆಗಲೇ ಮಧ್ಯಾಹ್ನ ೧ ಗಂಟೆಯಾಗಿತ್ತು. ಪ್ರತಿವಾರಮುಂಜಾನೆ ೯ ಗಂಟೆಗೆ ಪ್ರಾರಂಭವಾಗಿ ಮಧ್ಯಾಹ್ನ ೧ ಗಂಟೆಗೆ ನ್ಯಾಯಾಲಯ ಮುಕ್ತಾಯ ಗೊಳ್ಳುವ ಪದ್ಧತಿ.

ಆದರೆ ಇಂದು ನ್ಯಾಯಾಧೀಶರು ಮಧ್ಯದಲ್ಲಿ ಒಮ್ಮೆ ಮಾತ್ರ ವಿರಾಮಕ್ಕೆ ಕಾರ್ಯವನ್ನು ಸ್ಥಗಿತಗೊಳಿಸಿದ್ದರು. ಅವಿಶ್ರಾಂತವಾಗಿ ನಾಲ್ಕು ಗಂಟೆ ನ್ಯಾಯಾಲಯ ಕಾರ್ಯ ನಡೆಸಿದ್ದರಿಂದ ಬಹುಶಃ ಇಂದು ಉಳಿದ ಕಾರ್ಯವನ್ನೆಲ್ಲ ಮುಂದಿನ ವಾರಕ್ಕೆಂದು ಗೊತ್ತುಪಡಿಸಬಹುದಾಗಿ ನಾವು ತಿಳಿದಿದ್ದೆವು. ಆದರೆ ನ್ಯಾಯಾಧೀಶರು ತಮ್ಮ ನೆರವಿಗೆ ಇರುವ ಗೌರವ ನ್ಯಾಯಾಧೀಶರನ್ನು ಇನ್ನೂ ಎರಡು ಗಂಟೆ ಸಮಯ ನ್ಯಾಯಕಾರ್ಯವನ್ನು ನಡೆಯಿಸಲು ಒಪ್ಪಿಸಿಕೊಂಡು ಕಾರ್ಯೋದ್ಯುಕ್ತರಾದರು.

ಸಾಧು ಸಂಪ್ರದಾಯದಂತೆ ದೇವರನ್ನು ಸ್ಮರಿಸಿದನು. ತನ್ನ ಹೇಳಿಕೆಯನ್ನು ಪ್ರಾರಂಭಿಸಿದನು. ನ್ಯಾಯಾಲಯದ ಉಪಾಧಿಕಾರಿಗೆ ಸಾಧುವಿನ ಹೇಳಿಕೆಯನ್ನು ಅಕ್ಷರಶಃ ಬರೆದುಕೊಳ್ಳಲು ತಿಳಿಸಿ, ನ್ಯಾಯಾಧೀಶರು ತನ್ಮಯರಾಗಿ ಕೇಳುತ್ತ ಕುಳಿತರು. ಆಗಾಗ ಮಹತ್ವದ ಚುಟುಕುಗಳನ್ನು ನೆನಪಿಗಾಗಿ ಗುರುತಿಸಿಕೊಳ್ಳುತ್ತಿದ್ದರು. ನಮ್ಮ ಅಧಿಕಾರಿಣಿಯ ಪರವಾಗಿ ನಾನೂ ಆ ಹೇಳಿಕೆಯ ಮಹತ್ವದ ಅಂಶಗಳನ್ನು ಬರೆದು ಕೊಳ್ಳುತ್ತಿದ್ದೆನು.

ಸಾಧುವಿನ ಹೇಳಿಕೆಯು ಮೊದಮೊದಲು ತಡವರಿಸುತ್ತ ಸಪ್ಪೆ ಕಂಡರೂ, ಬರಬರುತ್ತ ಜೀವಕಳೆ ತುಂಬಿಕೊಂಡಿತು. ಅದೊಂದು ಮಹಾನಿವೇದನೆ. ಅದ್ಭುತ ಆಘಾತಗಳನ್ನು ಸಮಾಜಕ್ಕೆ ಕೊಟ್ಟ ಘಟನೆಗಳ ಮಹಾಪೂರ–ಈ ಸಾಧುಮಹಾಶಯನ, ಅವನ ಗುಂಪಿನ ಜೀವನ. ಕಾಷಾಯವನ್ನು ಧರಿಸಿ ತಾನು ಅರಿಯದ ಸರಳ ಜನಗಳನ್ನು ಹೇಗೆ ಸುಲಿದನೆಂಬುದನ್ನು ಅವನು ನೇರವಾಗಿ ಬಿಚ್ಚಿ ಹೇಳದಿದ್ದರೂ, ಈ ಕಾಪಟ್ಯದ ಚಿತ್ರಗಳು ಅವನ ಹೇಳಿಕೆಯಲ್ಲಿ ಇಣಿಕಿ ಹಾಕುತ್ತಿದ್ದವು. ಅವನ ಮಾತುಗಳನ್ನು ಅವನೇ ಬಣ್ಣಿಸಿದರೆ ಇನ್ನೂ ಪರಿಣಾಮಕಾರಿಯಲ್ಲವೆ? ಅವನ ಭಾಷೆ ಹಿಂದೀ–ಸರಳ ಜನಬಳಕೆಯ ಹಿಂದೀ, ಎಲ್ಲರಿಗೂ ಅರ್ಥವಾಗುವ ಹಿಂದೀ. ಅವುಗಳನ್ನೇ ಕನ್ನಡದಲ್ಲಿಟ್ಟಿದ್ದೇನೆ.

"ಮಹಾಮಾನ್ಯರೆ, ನಾನು ಉತ್ತರ ಪ್ರದೇಶದ ಒಂದು ಹಳ್ಳಿಯ ದೇವಮಂದಿರದ ಪೂಜಾರಿ. ನಮ್ಮ ಹಳ್ಳಿಯಿರುವುದು ಯಾತ್ರಾಸ್ಥಳಗಳಿಗೆ

ಹೋಗುವ ಒಂದು ಮಹಾಮಾರ್ಗದಲ್ಲಿ. ಮಾರ್ಗಕ್ಕೆ ಹೊಂದಿ ಒಂದು ವಿಶಾಲ ಜಲಾಶಯದ ದಂಡೆಯಲ್ಲಿ—ನಮ್ಮೂರಿನ ದೇವಾಲಯ. ಎಷ್ಟೋ ತಲೆಮಾರು ಗಳಿಂದ ನಮ್ಮವರು ಈ ದೇವಾಲಯದ ಪೂಜಾರಿಗಳು. ಯಾತ್ರಿಕರು ನಮ್ಮ ದೇವಾಲಯದ ವಿಶಾಲ ಬಿಡಾರದಲ್ಲಿ ತಂಗಿ ಮುಂದೆ ಸಾಗುವ ಪರಿಪಾಠ. ಅಂತಾಗಿ ದೇವಾಲಯದ ಉತ್ಪನ್ನ ಕಣ್ಣು ಕುಕ್ಕಿಸುವಂತಹದೆ. ನನ್ನ ತಂದೆ ಮುಪ್ಪಿನವರಾದುದರಿಂದ, ಚಿಕ್ಕವನಾದ ಏಕಮಾತ್ರ ಪುತ್ರನಾದ ನನ್ನನ್ನು ಪೂಜಾಕಾರ್ಯಕ್ಕೆ ಗೊತ್ತುಮಾಡಿದರು. ಈ ಕಾರ್ಯದಿಂದಲೇ ನಮ್ಮ ಉದ ರಂಭರಣೆ. ಇಂತಾಗಿ ನನ್ನ "ಬೇಗು ಬೆಳಗು" ಇದರಿಂದಲೇ ಎಂಬ ನಿರ್ಧಾರ ದಿಂದ ನಾನು ಮನಸ್ಸು ಮಾಡಿ ದುಡಿಯಹತ್ತಿದೆನು. ದೇವರು ನನ್ನ ಈ ಕಾರ್ಯವನ್ನು ಸರಳ ಮುಂದುವರಿಸಲಿಲ್ಲ. ನಮ್ಮ ಮನೆಯಲ್ಲಿ ನಾನು, ನನ್ನ ತಂಗಿ, ನಮ್ಮ ತಂದೆ ಮೂವರೇ. ನನ್ನ ತಾಯಿ ನಮ್ಮ ತಂಗಿಯ ಹುಟ್ಟಿ ನಲ್ಲಿಯೇ ತೀರಿಕೊಂಡಳು. ನಮ್ಮ ತಂದೆ ನಮ್ಮ ಪಾಲನೆ ಪೋಷಣೆ ಮಾಡಿದ. ನನ್ನ ತಂಗಿ ನನಗಿಂತ ಆರು ವರ್ಷಕ್ಕೆ ಚಿಕ್ಕವಳು. ನಾನು ಪೂಜಾಕಾರ್ಯ ಪ್ರಾರಂಭಿಸಿದಾಗ ಅವಳು ಹತ್ತು ವರ್ಷದವಳು. ಮೂರುವರ್ಷ ನಾನು ಹಗಲಿರುಳೆನ್ನದೆ ದುಡಿದು, ಬಂದು ಹೋಗುವವರನ್ನೆಲ್ಲ ಸಂತಯಿಸಿ, ಕೈಯಲ್ಲಿ ಕಾಸು ಮಾಡಿಕೊಂಡೆನು. ನನ್ನ ತಂದೆಗೆ ಸಂಪಾದನೆಯ ವಿಷಯ ತಿಳಿಸಿದಾಗ, ಆತ ನೇರವಾಗಿ ನನಗೆ ಒಂದು ಹೊಲವನ್ನು ಕೊಂಡುಕೊಳ್ಳಲು ಹೇಳಿದನು. ಅವನ ಸೂಚನೆಯಂತೆ ನಾನು ನೆರೆಹೊರೆಯವರಲ್ಲಿ ವಿಚಾರಿಸಿ. ವಿಕ್ರಯಕ್ಕೆ ಒಂದು ಹೊಲವನ್ನು ಗೊತ್ತುಪಡಿಸಿ, ನನ್ನ ತಂದೆಗೆ ತಿಳಿಸಿದೆನು. ತಂದೆಯು ವರು ತಮ್ಮಲ್ಲಿ ಕೂಡಿಟ್ಟ ಹಣವ ವಿಷಯವನ್ನೂ ತಿಳಿಸಿ, ಅದನ್ನು ನನ್ನ ತಂಗಿಯ ಮದುವೆಗೆ ಕಾಯ್ದಿರಿಸುವದಾಗಿ ಹೇಳಿದರು. ನನಗೆ ನನ್ನ ಜೀವನದಲ್ಲಿ ಹೊತ್ತುಕೊಳ್ಳಬೇಕಾಗಿದ್ದ ಭಾರದಲ್ಲಿ ಅರ್ಧವನ್ನು ಇಳಿಸಿದಂತಾಯಿತು. ಇದು ತಂದೆ ಮಕ್ಕಳ ಗುಟ್ಟು. ಹೊರಗಿನ ಜಗತ್ತಿನ ಕಣ್ಣಿನಲ್ಲಿ ಆಗಲೇ ನನ್ನ ಹೊಲದ ಪ್ರಸ್ತಾಪವು ಕೆಂಪು ತುಂಬುತ್ತಿತ್ತು. ಊರಿದ್ದಲ್ಲಿ ಕೇಡಿನ ಕೇರಿ ಇದ್ದೇ ಇರಬೇಕಲ್ಲ. ಈ ಓಣಿಗೆ ಒಬ್ಬ ಕೇಣಿಕಾರನೂ ಇರಲೇಬೇಕಲ್ಲ. ಯಃಕಶ್ಚಿತ್ ಒಬ್ಬ ಪೂಜಾರಿ "ಬಿಟ್ಟಿ ಬೀಕಲು" ತಿಂದು ಬಾಳುವೆ ಮಾಡುವದನ್ನು ಬಿಟ್ಟು, ಈಗ ಹೊಲದ ಒಡೆತನಕ್ಕೆ ಕೈಹಾಕಬೇಕಾದರೆ, ಈ ದೇವ ಮಂದಿರದ ಉತ್ಪನ್ನ

ಸಾಕಷ್ಟಿರಬೇಕು. ಎಂಬ ಎಣಿಕೆಯನ್ನು ಹಾಕುವ "ಗೆಣೆಯ" ಒಬ್ಬನು ನನ್ನೊಂದಿಗೇ ಹುಟ್ಟಿಬಂದಿದ್ದನು. ನಾನು ಮಾಡಿದ ತಪ್ಪನ್ನು ಇನ್ನು ಮುಂದೆ ಯಾವ ದೇವರ ಪೂಜಾರಿಯೂ ಮಾಡಕೂಡದೆಂದು ನಾನು ಅವರಿಗೆ ಬಿದ್ದು ಬೇಡಿಕೊಳ್ಳುತ್ತೇನೆ. ಭಕ್ತರಿಂದ ಬಂದುದನ್ನು ಭೂಮಿತಾಯಿಯ ಗರ್ಭದಲ್ಲಿ ಹೂಳಿಟ್ಟು, ಆಗೊಮ್ಮೆ ಈಗೊಮ್ಮೆ ಇಟ್ಟದ್ದನ್ನು ಮುಟ್ಟಿನೋಡಿ ಸಂತೃಪ್ತಿ ಪಡುತ್ತ ಹೋಗಬೇಕು. ಇಲ್ಲಿಡದೆ, ಅದನ್ನು ಕೊಟ್ಟು, ಭೂಮಿಯ ಉಡುಪು (ಹೊಲ)ಗಳನ್ನು ಕೊಳ್ಳಲು ಮನಸ್ಸು ಮಾಡಿದರೆ, ನನಗೆ ಬಂದ ಪಾಡೇ ನನ್ನಂತಹರಿಗೂ ಬಂದೇ ಬರುವದು. ಭೂಮಿತಾಯಿ ಒಲಿಯುವದು, ಅವಳ ಸೇವೆಯನ್ನು ಮನುಷ್ಯಕುಲದ ಹುಟ್ಟಿನಿಂದಲೂ ಎಡೆಬಿಡದೆ ಮಾಡುತ್ತ ಬಂದಿರುವ, ವಂಶಪಾರಂಪರ್ಯದ ನೆಲದ ಮಕ್ಕಳಿಗೇ. ಉಳಿದ ಕಾಯಕದಲ್ಲಿದ್ದವರು ಇದರಿಂದ ಏಳಿಗೆಯಾಗಿದ್ದನ್ನೇ ನಾನು ಕಂಡಿಲ್ಲ. ನಾನು ನವಮನ್ವಂತರದ ಮನುಷ್ಯನಾಗಬೇಕೆಂದು, ಬಂದು ಹೋಗುವ ಯಾತ್ರಿಕರ ಉಪದೇಶಕ್ಕೆ ಕಟ್ಟುಬಿದ್ದು, ಈ ಮಾಡಬಾರದ ಕಾರ್ಯಕ್ಕೆ ಮನುಸ್ಸುಮಾಡಿದ್ದು. ನನ್ನ ತಂದೆ ನನ್ನ ಮಾತಿಗೆ ಒಪ್ಪಿದ್ದು ನನ್ನ ಹಿತದ ದೃಷ್ಟಿಯಿಂದಾದರೂ ಅದೇ ನನಗೆ ಅಹಿತವಾದದ್ದನ್ನು ನೋಡಲು ಅವರು ಬಹಳ ದಿವಸ ಬದುಕಿ ಉಳಿಯಲಿಲ್ಲ. ನನ್ನ ತಂದೆಯು ಗತಿಸಿದ ಅನಂತರ ಅತಿ ಪರಿಶ್ರಮ ಪಟ್ಟರೂ ನನಗೆ ಆ ಹೊಲವನ್ನು ಕೊಳ್ಳುವದಾಗಲಿಲ್ಲ. ನನ್ನ ತಂಗಿಯ ಮದುವೆಯ ಸಮಸ್ಯೆಯು ನನ್ನ ತಲೆತಿನ್ನ ಹತ್ತಿತು. ತಂಗಿಯ ಮದುವೆ ಮಾಡಿದ ಅನಂತರ ನಾನು ಹೊಲಹಿಡಿವ ಅಥವಾ ಬಿಡುವ ವಿಚಾರ ಮಾಡುವದೆಂದು ನಿರ್ಧರಿಸಿ, ನನ್ನ ನಿತ್ಯದ ಕಾರ್ಯದಲ್ಲಿ ಒಂದಾದೆನು. ಮನೆಮಂದಿರಗಳ ಅಂಗಳವನ್ನು ಬಿಟ್ಟು, ಮತ್ತೊಂದು ಊರುಕೇರಿಯನ್ನು ಕಾಣದ ನಾನು ನನ್ನ ತಂಗಿಯ ಮದುವೆ ಮಾಡುವದೆಂತು. ಇಂತಾಗಿ ನಾನು ಬರುವ ಹೋಗುವ ಯಾತ್ರಿಕರ ಮತ್ತು ಊರೊಳಗಿನ ಕೆಲ ಜನರ ಪರಿಚಯ ಮಾಡಿಕೊಳ್ಳಲೇ ಬೇಕಾಯಿತು. ಜಗತ್ತು ಬಿಟ್ಟು ನಾನು ಬಾಳುವ ಬಗೆಯಾದರೂ ಹೇಗೆ?

ನನ್ನ ತಂಗಿಗೆ ಕೆರೆಯ ಕಮಲ, ಗುಡಿಯ ಮೂರ್ತಿ, ಅಂಗಳದ ಗೋಮಾತೆ ಗೋಪುತ್ರಿ, ಗೋಪುತ್ರ ಮತ್ತು ಅವಳ ಅಣ್ಣ ನಾನು—ಇಷ್ಟೇ

ಅವಳ ಒಡನಾಟ. ಹಾಯ್! ನನ್ನ ತಂಗಿ! ಮಹಾಮಾನ್ಯರೆ! ನಾನೂ ಜಗತ್ತಿನಲ್ಲಿ ಬಹಳ ತಿರುಗಿದ್ದೇನೆ. ಅವಳ ವಾತ್ಸಲ್ಯ ಪೂರ್ಣವಾದ ಸತ್ಯಶಿವ ಸೌಂದರ್ಯವನ್ನು ಬೇರೆ ನಾನು ಇನ್ನೂ ಕಂಡಿಲ್ಲ. ನನ್ನ ತಾಯಿಯ ತಂದೆಯ ಸಾತ್ವಿಕ ಜೀವನದ ತಪೋಫಲ ಮೂರ್ತಿಯಾಗಿ ಅವಳು ಹುಟ್ಟಿ ಬಂದಿರಬೇಕು.

ತಾಯಿಯನ್ನು ನಾನು ಇಷ್ಟರಲ್ಲಿಯೇ ಮನುಷ್ಯ ಸ್ವಭಾವಗುಣದಿಂದ ಮರೆಯುಬಹುದಾಗಿತ್ತು. ಆದರೆ ನನ್ನ ತಂಗಿ ನನ್ನ ತಾಯಿಯಾಗಿ ತಂದೆಯಾಗಿ ಬದುಕಿದ್ದಾಳೆ.

(೧೪)

ತಂಗಿ ಬದುಕಿರುವದು ಹಿಮಾಲಯದ ಹಿಮರಕ್ಷಿತ ಹಳ್ಳಿಯೊಂದರಲ್ಲಿ. ನನ್ನ ತಂಗಿಯ ವಿವಾಹವನ್ನು ನಾನು ಮಾಡಿದ್ದನ್ನು ಬಣ್ಣಿಸುತ್ತ ನಿಂತರೆ, ಜಗತ್ತಿನ ವ್ಯಾಪಾರಗಳನ್ನೇ ಮರೆಯುವೆನು. ಆ ವಿಷಯವನ್ನು ಈಗ ಪ್ರಸ್ತಾಪಿಸುವದಿಲ್ಲ ಅದೊಂದು ರಸಮಯ ರಹಸ್ಯ ರೋಮಾಂಚಕ ಸಾಹಸೀ ಕಾರ್ಯ. ಅವಳ ಮದುವೆಯ ಅನಂತರ ನಾನು ಅವಳನ್ನು ಕಾಣುವದು ಪರ್ವತ ರಾಜನ ಪುತ್ರಿಯನ್ನು ಸಂದರ್ಶಿಸಿದಂತೆಯೇ. ವಾತ್ಸಲ್ಯಕ್ಕೆ ಶಬ್ದಕೋಶದಲ್ಲಿ ಸರಿಯಾದ ಅರ್ಥ ತಮಗೆ ಸಿಗದಿದ್ದರೆ, ನನ್ನ ತಂಗಿಯು ನನ್ನನ್ನು ಕಂಡಾಗ ಧಾರೆಯೆರೆವ ಹೃದಯದ ಅಮೃತಸಿಂಚನವನ್ನು ಕಂಡು ಪರಿಪೂರ್ಣವಾಗಿ ಅರ್ಥಮಾಡಿಕೊಳ್ಳಬಹುದು. ಅವಳ ಪತಿದೇವ ಮುಗ್ಧ ಭೋಲಾಶಂಕರ. ತನ್ನ ನಿತ್ಯದ ಕಾರ್ಯ ಒಂದೇ ಅವನ ಜಗತ್ತು. ಅವರಿಗೆ (ನನ್ನ ತಂಗಿ, ತಂಗಿಯ ಪತಿದೇವ) ಒಬ್ಬನೇ ಒಬ್ಬ ಕುಮಾರ. ಈ ಕುಟುಂಬಕ್ಕೆ ಆಸ್ತಿ ಇಪ್ಪತ್ತೈದು ಕುರಿಗಳು. ಜೊತೆಗೆ ದೇವ ಮಂದಿರದ ಪೂಜೆ. ನನ್ನ ತಂಗಿಯ ಕುಟುಂಬವೊಂದೇ ಆ ಸ್ಥಳದಲ್ಲಿ. ಸುತ್ತು ಇಪ್ಪತ್ತೈದು ಮೈಲುಗಳಲ್ಲಿ ಮತ್ತೊಂದು ಕುಟುಂಬವಿಲ್ಲ. ಮತ್ತೊಂದು ಹಳ್ಳಿಯಿಲ್ಲ. ನನ್ನ ತಂಗಿಯ ಪತಿ ಹೇಳುವಂತೆ, ಅವರ ತಂದೆ-ತಾಯಿ-ಬಂಧು-

ಬಳಗ-ಮಿತ್ರ-ರಕ್ಷಕ ಎಲ್ಲವೂ ಆ ದೇವ ಮಂದಿರದ ಹಸನ್ಮುಖ ಮೂರ್ತಿ ಒಬ್ಬನೇ.

ನಾನು ಒಂದು ಸ್ನಾನ ಒಂದು ಊಟ ಮಾತ್ರ ಅವರಲ್ಲಿ ಮಾಡುತ್ತೇನೆ. ಅದೂ ಒಂದು ಅಂಗಳದಲ್ಲಿ ಯಾತ್ರಿಕನಂತೆ ಕುಳಿತು. ಒಂದೂ ನಿದ್ರೆಯನ್ನು ಅವರಲ್ಲಿ ಮಾಡಿಲ್ಲ ಮಾಡುವದಿಲ್ಲ. ಆ ಪವಿತ್ರ ಜೀವನಕ್ಕೆ ನನ್ನ ಸಹ ವಾಸದ ಸೋಂಕು ಬೇಡ.

ಮಹಾಮಾನ್ಯರೆ, ನಾನು ಬಹುಶಃ ತಮ್ಮ ಮುಂದೆ ಇನ್ನೊಮ್ಮೆ ನಿಲ್ಲುವ ಪ್ರಸಂಗ ಬರುವುದೇ ಇಲ್ಲ. ನಾಲ್ಕೇ ನಾಲ್ಕು ಮಾತುಗಳಲ್ಲಿ ನನ್ನ ತಂಗಿಯ ಮದುವೆಯ ಪ್ರಸ್ತಾಪ ಮುಗಿಸುತ್ತೇನೆ. ಅನಂತರ ನನ್ನ ಮತ್ತು ನಮ್ಮ ಊರಿನ ಬಂಡರ ನಡುವೆ ನಡೆದ ಕಾಳಗವನ್ನು ಸ್ವಲ್ಪ ಸಮಯದ ಲ್ಲಿಯೇ ವರ್ಣಿಸುತ್ತೇನೆ. ತದನಂತರವೇ ನಾನು ತಮ್ಮ ನ್ಯಾಯಸ್ಥಾನ ಎದುರು ನಿಂತಿರುವ ಪ್ರಸಂಗದ ಮೂಲ ಕಾರಣವನ್ನು ವಿವರಿಸುತ್ತೇನೆ. ನನಗೆ ಈಗ ಜೀವನದಲ್ಲಿ ಯಾವ ಮಹತ್ವದ ಆಶೆ ಆಕಾಂಕ್ಷೆಗಳನ್ನು ಪೂರೈ ಸುವದು ಇಲ್ಲ. ನಾನು ಮಾತನಾಡುವದು ಇನ್ನು ಮೇಲೆ ಎಲ್ಲವೂ ಇದ್ದವು ಗಳನ್ನು ಇದ್ದಂತೆಯೇ.

ನನ್ನ ತಂದೆ ತೀರಿದುದನ್ನು ಕೇಳಿ ನನ್ನ ತಂದೆಯ ಹಳೆಯ ಪರಿಚಿತ ಯಜಮಾನರೊಬ್ಬರು ನಮ್ಮಲ್ಲಿಗೆ ಬಂದರು. ಅವರು ೧೨ ವರ್ಷದಲ್ಲಿ ಒಮ್ಮೆ ತಪ್ಪದೇ ನಮ್ಮ ತಂದೆಯವರನ್ನು ಕಂಡು ಮಾತನಾಡಿಸಿ ಹೋಗುವ ಪರಿ ಪಾಠವಿತ್ತಂತೆ. ನಾನು ಚಿಕ್ಕವನಿದ್ದಾಗ ನಮ್ಮ ತಾಯಿ-ತಂದೆಯವರನ್ನು ಕಂಡುಹೋಗಿದ್ದನ್ನು ಅವರು ಹೇಳಿದರು. ಅವರು ನಮ್ಮ ತಾಯಿಗೆ ದೂರದ ಸಂಬಂಧವುಳ್ಳವರು. ಅದೂ ನನಗೆ ತಿಳಿದದ್ದು ಇತ್ತೀಚೆಗೆ. ಅವರು ನಮ್ಮನ್ನು ಆತ್ಮೀಯವಾಗಿ ಕಂಡದ್ದರಿಂದ ನಾನು ಅವರಲ್ಲಿ ನಮ್ಮ ತಂಗಿಯ ವಿವಾಹದ ವಿಚಾರವಾಗಿ ಮಾತನಾಡಿದೆನು ನನ್ನ ತಂಗಿಯ ಮದುವೆಯನ್ನು ನಾವಿದ್ದ ಊರಲ್ಲಿಯೇ ಮಾಡುವದು ಈಗಿದ್ದ ಪರಿಸ್ಥಿತಿಯಲ್ಲಿ ಸಾಧ್ಯವಿಲ್ಲವೆಂದು ನಾನು ಅವರಿಗೆ ಸಕಾರಣವಾಗಿ ತಿಳಿಸಿದೆನು. ಉಳಿದ ಎಲ್ಲ ಮಾತುಗಳನ್ನೂ

ಕೇಳಿಕೊಂಡು ಅವರು ನನಗೆ ಆಶ್ಚರಿಯಾಗುವ ಒಂದು ಸೂಚನೆಯನ್ನು ಮಾಡಿದರು. ಅದೇ ನನ್ನ ತಂಗಿಯ ಮದುವೆಗೆ ಪೀಠಿಕೆಯಾಯಿತು. ಅವರಿಗೆ ಇರುವವನು ಒಬ್ಬನೇ ಮಗ. ಆದರೆ ಅವರು ಬಡವರು. ದೂರದ ಹಿಮಾಲಯದ ಅಡಿಯಲ್ಲಿರುವವರು. ಅಷ್ಟು ದೂರ ನಿರ್ಗತಿಕರಾದ ತಮ್ಮ ಮನೆಗೆ ನಮ್ಮ ತಂಗಿಯನ್ನು ಒಪ್ಪಿಸಲಿಕ್ಕಿಲ್ಲವೆಂದು ಅವರು ಇಷ್ಟು ದಿನ ನಮ್ಮ ತಾಯಿ-ತಂದೆಯರೊಡನೆ ಈ ಮಾತು ಆಡಿದ್ದಿಲ್ಲ. ಇತ್ತೀಚೆಗೆ ಮೂರು ನಾಲ್ಕು ವರ್ಷಗಳಿಂದ ಈ ಮಾತು ಆಡಿಯೇ ತೀರಬೇಕೆಂದು ನಿರ್ಧಾರಕ್ಕೆ ಬಂದಿದ್ದರೂ ಇಲ್ಲಿಗೆ ಬರುವದಾಗಿರಲಿಲ್ಲ. ನಮ್ಮ ತಂದೆಯ ಮರಣದ ವಾರ್ತೆಯನ್ನು ಯಾತ್ರಿಕರಿಂದ ತಿಳಿದುಕೊಂಡು, ಕೇವಲ ಸಾಂತ್ವನದ ಮಾತುಗಳನ್ನು ನನ್ನೊಡನೆ ಮುಗಿಸಿ ಹೋಗಲು ಅವರು ಬಂದಿದ್ದರು. ನಾನು ಅವರಲ್ಲಿ ತಂಗಿಯ ಮದುವೆಯ ಮಾತು ಎತ್ತಿದಾಗ ಅವರಿಗೆ ಯೋಗ್ಯ ಸಮಯ ದೊರೆತು, ತಮ್ಮ ಮಗನಿಗೆ ನಮ್ಮ ತಂಗಿಯನ್ನು ಒಪ್ಪಿಸಲು ಕೇಳಿದರು. ಮದುವೆಯನ್ನು ಮಾಡುವ ಹೊಣೆಗಾರಿಕೆಯನ್ನು ಅವರು ಹೊತ್ತುಕೊಂಡರು. ಕೆಲವು ಸೂಚನೆಗಳನ್ನು ನಮ್ಮಿಬ್ಬರಿಗೆ ಕೊಟ್ಟು ನಮ್ಮೂರಿನ ದೈವದವರನ್ನು ಕಾಣಲು ಹೋದರು. ಒಂದೆರಡು ಗಂಟೆಗಳಾದ ಮೇಲೆ ಊರಿನ ಹಿರಿಕಿರಿಯರೊಡನೆ ನಮ್ಮಲ್ಲಿಗೆ ಬಂದರು. ದೈವದವರು ನನ್ನನ್ನು ಆಗ್ರಹಿಸಿದ್ದು ಎರಡು ಗಂಟೆಗಳ ಕಾಲ. ನಮ್ಮ ತಂದೆ-ತಾಯಿಯರು ತೀರಿಕೊಂಡ ಅನಂತರ ನಾನು ಮನೆಯಲ್ಲಿ, ಅಜ್ಞಾನದಿಂದ ಮುಖ್ಯ ಕಾರ್ಯಗಳನ್ನೂ ಮಾತಾಪಿತೃ ಋಣವಿಮೋಚನಾ ಕಾರ್ಯಗಳನ್ನೂ ಮಾಡಿಸಿಲ್ಲ. ಸಮಯ ಮೀರಿ ಹೋದುದರಿಂದ ಹರದ್ವಾರದ ಮುಖ್ಯ ಋಷಿಪುಂಗವರಲ್ಲಿ ಹೋಗಿ ಕ್ಷಮಾಯಾಚನಾರ್ಥಿಯಾಗಿ ಈ ಕಾರ್ಯಗಳನ್ನು ಮುಗಿಸಿಕೊಂಡು ಬರಬೇಕು. ಈ ಕಾರ್ಯದಲ್ಲಿ ನಮ್ಮ ಹಿರಿಯರ ಪರಿಚಿತರು ನೆರವಾಗುವರು. ಊರೊಳಗಿನವರು ಧನಧಾನ್ಯವನ್ನು ತಮ್ಮ ಕೈಲಾದ ಮಟ್ಟಿಗೆ ಕೂಡಿಸಿಕೊಡುವರು. ಒತ್ತಾಯಕ್ಕೆ ತಲೆಬಾಗಿದವನಾಗಿ ನಾನು ಒಪ್ಪಿಗೆಯನ್ನಿತ್ತೆನು. ಊರವರು ಮನೆಗಳಿಗೆ ಹಿಂದಿರುಗಿದರು.

ಎರಡು ದಿನಗಳ ಮಟ್ಟಿಗೆ, ನನ್ನ ತಂಗಿಯ ಭಾವೀ ಮಾವಂದಿರು ಸಮೀಪದ ಪರಿಚಿತ ಯಾತ್ರಾ ಸ್ಥಳಕ್ಕೆ ಹೋಗಿ ಒಬ್ಬ ವಯಸ್ಕರನ್ನು ನಮ್ಮ

ಲ್ಲಿಗೆ ಕರೆತಂದು, ನಮ್ಮ ದೇವಮಂದಿರದ ಪೂಜಾ ಕಾರ್ಯಕ್ಕೆ ಗೊತ್ತುಪಡಿಸಿದರು. ಮುಂದೆ ಎರಡು ದಿನಗಳಲ್ಲಿಯೇ ನಾನು, ನನ್ನ ತಂಗಿಯ ಒಪ್ಪಿಗೆ ಪಡೆದು, ಮನೆಯಲ್ಲಿ ತಂದೆಯವರು ಅವಳಿಗಾಗಿ ಇಟ್ಟಿದ್ದುದೆಲ್ಲವನ್ನು ಅವಳ ಪದರಿಗೆ ಕಟ್ಟಿ, ನನ್ನ ಹಣವನ್ನು ನನ್ನ ಪದರಿಗೆ ಕಟ್ಟಿಕೊಂಡು, ನಮ್ಮ ತಂಗಿ ಮಾವಂದಿರೊಂದಿಗೆ ಹಿಮಾಲಯದ ಯಾತ್ರೆ ಬೆಳೆಸಿದೆನು. ದೈವದವರು ನಾವು ಹೊರಡುವ ದಿನ ಧನಧಾನ್ಯ ತಂದೊಪ್ಪಿಸಿದರು. ಅದರಲ್ಲಿ ಅರ್ಧದಷ್ಟನ್ನು ನನ್ನ ಮನೆಯಲ್ಲಿರಿಸಿದೆ. ಹೊಸದಾಗಿ ಪೂಜಾ ಕಾರ್ಯಕ್ಕಾಗಿ ಬಂದವರ ಒಳಕೆಗಾಗಿ. ಹೊಸ ಮುಖವನ್ನು ಕಂಡಾಗ ಊರವರು ಆಶ್ಚರ್ಯಗೊಂಡರು. ಕಸಿವಿಸಿಗೊಂಡರು. ಆದರೆ ನಮ್ಮ ಭಾವೀ ಮಾವಂದಿರ ಮುಖಮುದ್ರೆ ಅವರ ವೃದ್ಧ ತಪಸ್ವಿಯ ನಡವಳಿಕೆ, ಊರಿನವರ ಬಾಯಿಗೆ ಬೀಗ ಹಾಕಿತು. ತುಟಿ ಬಿಚ್ಚಲಿಲ್ಲ. ಪಿಟ್ಟೆನ್ನಲಿಲ್ಲ. ಊರಿನವರು, ನಾನು ನನ್ನ ಸಿದ್ಧತೆಯ ಗಡಿಬಿಡಿಯಲ್ಲಿ ಇದ್ದವನು. ಯಾವುದಕ್ಕೂ ಉತ್ತರ ಕೊಡಲು ಸಮಯವಿಲ್ಲದವನು. ಹಿರಿಯರ ಸೂಚನೆಯೇ ಹಾಗಿತ್ತು. ಸುಮ್ಮನೆ "ತೇಲಿಸಿಕೊಂಡು" ಸಾಗಬೇಕು. ನಮ್ಮ "ಸಮಯ ನೌಕೆ" ಯನ್ನು ಸಂಸಾರದಲ್ಲಿ.

ಹೊಸಬರಿಗೆ ಕೊಡಬೇಕಾದ ಸೂಚನೆಗಳನ್ನು ಮೊದಲಿಗೇ ಕೊಟ್ಟಿದ್ದರಿಂದ ಅವರು ನಾವು ಹೊರಡುವ ಕಾಲಕ್ಕೆ ದೇವಮಂದಿರದಲ್ಲಿ ಮಹಾಪೂಜೆಯನ್ನೇರ್ಪಡಿಸಿದ್ದರು. ನಾವು ನಾಲ್ವರಲ್ಲದೇ ಇಡೀ ಊರಿನವರು 'ಅ' ಎಂದು ಬಾಯ್ತೆರೆದು ಪೂಜಾ ಕಾರ್ಯವನ್ನು ನೆರವೇರಿಸಿದೆವು. ಎಲ್ಲರ ಹಣೆಗಳ ಮೇಲೆ ದೇವಪ್ರಸಾದ ಭಸ್ಮಲೇಪನ. ನಮ್ಮ ಯಾತ್ರೆ ಆ ಸಮಯದಲ್ಲಿಯೇ ಪ್ರಾರಂಭವಾಯಿತು. ಇಡೀ ಊರು (ಆಗದ ಒಬ್ಬಿಬ್ಬರನ್ನು ಬಿಟ್ಟು) ಭಾವನಾ ಪರವಶವಾಗಿ ನಮ್ಮನ್ನು ಬೀಳ್ಕೊಟ್ಟಿತು. ಹೆಣ್ಣುಮಕ್ಕಳಂತೂ ಕಣ್ಣೀರಿನ ಕಡಲಿನಲ್ಲಿಯೇ ನಮ್ಮ ಸಮಯ-ನೌಕೆಯನ್ನು ಮುಂದೆ ಸಾಗಿಸಿದರು. ನನ್ನ ತಂಗಿ ಮುಗ್ಧೆ. ಅಂದೇ ಊರವರು ಅವಳನ್ನು ಮುಕ್ತ ಮನಸ್ಸಿನಿಂದ ನೋಡಿದ್ದು. ಕೋಮಲ ಹೃದಯ ಉಮ್ಮಳಿಸಿ, ಅವಳು ದುಃಖಿಸುವದನ್ನು ಕಂಡಾಗಂತೂ ಊರಿನ ಎಲ್ಲ ಹೆಣ್ಣು ಗಂಡು ಮಕ್ಕಳು

ಮಾತು ಬಾರದವರಾಗಿ ಅಳುತ್ತ ನಿಂತರು. ಈ ಕಣ್ಣೀರಿನ ಹೆಪ್ಪು ಮಂಜಿನಲ್ಲಿಯೇ ನಾವು ಊರು ಬಿಟ್ಟು ಬಂದೆವು. ನಮ್ಮ ತಂಗಿಯನ್ನು ಅಲ್ಲಿಂದ ಕದಲಿಸುವಾಗ ನನಗಾದ ದುಃಖದ ಆಳದಲ್ಲಿ ನಾನು ಮುಳುಗಿ ಪ್ರಾಣ ಬಿಡಬಹುದಿತ್ತು. ಆದರೆ ನಮ್ಮ ಮಾವಂದಿರು ನಮ್ಮನ್ನು ಅನೇಕ ಸಮಯೋಚಿತ ಸಾಂತ್ವನ ಮಾತುಗಳಿಂದ ಸಂತೈಸಿ ಅಲ್ಲಿಂದ ಪರಶಿವನ ಸಹಧರ್ಮಿಣಿಯ ತವರೂರಿಗೆ ಕರೆದೊಯ್ದರು. ನನ್ನ ತಂಗಿ ಇಂದು ತನ್ನ ಹಳೆಯ ಹುಟ್ಟಿನ ಲೋಕವನ್ನು, ಅದರ ಮಣ್ಣಿನಲ್ಲಿ ನಮ್ಮ ತಾಯ್ತಂದೆಯರನ್ನು ಬೆರೆಸಿ, ತನ್ನ ಹೊಸ ಬಾಳಿನ ಲೋಕಕ್ಕೆ ಹೊರಟಿದ್ದಾಳೆ. ನಾನೂ ನೋಡಿಲ್ಲ. ಅವಳೂ ಕಂಡಿಲ್ಲ. ಅವಳ ಹೊಸ ಬಾಳಿನ ಅಧಿದೇವತೆಯನ್ನು. ಕೇವಲ ವಿಶ್ವಾಸ ನಮ್ಮಿಬ್ಬರ ಊರುಗೋಲು. ನನಗೆ ಒಬ್ಬನಿಗೆ ಗೊತ್ತು. ನನ್ನ ಮುಂದಿನ ಲೋಕಾಂತರಗಳು ಯಾವು ಎಂಬುದು.

ನನ್ನ ತಂಗಿಯ ಅಧಿದೇವತೆಯ ದರ್ಶನವಾದುದು ನಾವು ನಮ್ಮ ಊರು ಬಿಟ್ಟು ನಾಲ್ಕು ದಿನಗಳಾದ ಮೇಲೆ. ನಾವು ಅವರ ವಾಸಸ್ಥಳವನ್ನು ಸಮೀಪಿಸಿದಾಗ ನಮ್ಮ ಕಿವಿಗಳಿಗೆ ಕೇಳಿದ್ದು ದೇವಾಲಯದ ಪೂಜಾ ಘಂಟೆಗಳ ನಿನಾದ. ನಾವು ಪ್ರವೇಶಿಸಿದಾಗ ನಮ್ಮ ಅಧಿದೇವತೆ ಮಂದಿರದಿಂದ ಪೂಜಾ ಪ್ರಸಾದದಿಂದ ಹೊರಬಂದನು. ತಂದೆಯ ಆಗಮನವನ್ನು ಕಂಡ ಕ್ಷಣದಲ್ಲಿಯೇ, ಕೈಯೊಳಗಿನ ಸಾಮಗ್ರಿಗಳನ್ನು ಬದಿಗಿರಿಸಿ, ತಂದೆಯ ಪಾದಗಳಿಗೆ ಶಿರಮುಟ್ಟಿಸಿ ನಮಸ್ಕರಿಸಿದನು. ಅಭಿಮಾನದಿಂದ ತಂದೆಯು ಮಗನನ್ನೆತ್ತಿ ಮುಖದಲ್ಲಿ ಕಣ್ಣಿಟ್ಟು ನೋಡಿ ಮುಗುಳ್ನಗೆ ನಕ್ಕರು. ಮಗನು ಸಾಮಗ್ರಿಗಳೊಡನೆ ಮನೆಯಲ್ಲಿ ಹೋಗಿ, ಪ್ರವಾಸದ ಆಯಾಸ ಶಮನಾರ್ಥವಾಗಿ ತಣ್ಣೀರಿನ ಸೌಕರ್ಯವನ್ನೊದಗಿಸಿದನು. ತಂದೆಯ ಪಾದಗಳನ್ನು ಸ್ವತಃ ಕೈಮುಟ್ಟಿ ತೊಳೆದು ವಸ್ತ್ರದಿಂದ ಒರೆಸಿದನು. ನನ್ನ ಸರತಿ ಬಂದಾಗ ಹಿರಿಯರು ಆಗಲೇ ಗೃಹ ಪ್ರವೇಶ ಮಾಡಿದ್ದರು. ನಾನು ಅಧಿದೇವತೆಯಿತ್ತ ನೀರಿನಿಂದ ಉಪಶಮನ ಮಾಡಿಕೊಂಡೆನು. ನನ್ನ ತಂಗಿ ನನ್ನ ಹಿಂದೆ ನಿಂತು, ಭೂಮಿತಾಯಿಯ ಮಡಿಲಿನಲ್ಲಿ ಕಣ್ಣಿರಿಸಿದ್ದಳು. ಕೊನೆಯವರಿಗಾಗಿ ನೀರು ತಂದು ತಂದು ನಿಂತಿದ್ದ ಗೃಹಸ್ಥ. ನಾನು ಸರಿದು ನನ್ನ ತಂಗಿಗೆ ಕರೆದು ಸ್ವೀಕರಿಸಲು

ಹೇಳಿದೆ. ಆಗ ಅವಳು ಕಣ್ಣೆತ್ತಿದಳು. ಏನೂ ಅರಿಯದ ಮುಗ್ಧ ಅವಿವಾಹಿತ ಗೃಹಸ್ಥನು ಅದೇ ಕ್ಷಣ ನನ್ನ ತಂಗಿಯ ಮುಗ್ಧ ಸೌಂದರ್ಯ ವನ್ನು ಕಂಡು ದಿಙ್ಮೂಢನಾಗಿ ನಿಂತನು. ಮರು ಅರೆಗಳಿಗೆಯಲ್ಲಿ ಸ್ಥಿತಪ್ರಜ್ಞ ನಾಗಿ, ಸಹಜ ಸ್ವಾಗತವನ್ನು ಕೋರಿ ಸೀರನ್ನು ಒಪ್ಪಿಸಿ, ತನ್ನ ಮುಂದಿನ ಕಾರ್ಯಕ್ಕೆ ಹೋದನು. ನನ್ನ ತಂಗಿ ಮುಖ ತೊಳೆದುಕೊಂಡು ನನ್ನೊಡನೆ ಗೃಹ ಪ್ರವೇಶಮಾಡಿದಳು.

ಎಲ್ಲರೂ ಸ್ನಾನ ಪೂಜಾದಿಗಳನ್ನು ಮುಗಿಸಿ, ಪುನಃ ದೇವಪೂಜಾ ಕಾರ್ಯಕ್ಕೆ ಹೋದೆವು. ತಂದೆ-ಮಕ್ಕಳು ಜೊತೆಯಾಗಿ ಪೂಜೆಯನ್ನು ಮುಗಿಸಿದರು. ಪ್ರಸಾದ ವಿತರಣೆಯಾಯಿತು. ಅನಂತರ ಮಗನಿಂದ ತಮ್ಮ ಜ್ಯೋತಿರ್ಗ್ರಂಥವನ್ನು ತರಿಸಿಕೊಂಡು, ಅರ್ಧ ಘಂಟೆಯಲ್ಲಿ ಹಸನ್ಮುಖರಾಗಿ ಒಂದು ಹಾಳೆಯ ಮೇಲೆ ಗುರುತು ಹಾಕಿಕೊಂಡರು. ನನ್ನನ್ನು ಒದಿಗೆ ಕರೆದು ಮರುದಿನ ಗೋಧೂಳೀ ಸಮಯದಲ್ಲಿದ್ದ ಮುಹೂರ್ತವು ವಿವಾಹಕ್ಕೆ ಶುಭವೆಂದು ತಿಳಿಸಿದರು. ನನ್ನ ತಂಗಿಯನ್ನು ಕರೆದರು. ತಮ್ಮ ಮಗ ನನ್ನು ಕರೆದರು. ಪರಸ್ಪರರು ಮುಖವನ್ನೆತ್ತಿ ನೋಡಿಕೊಳ್ಳುವಂತೆ ಹೇಳಿ ದರು. ಮಗನ ತಂದೆಯಾದ ತಾವೂ ತಂಗಿಯ ಅಣ್ಣನಾದ ನಾನೂ ಅವರಿ ರ್ವರ ವಿವಾಹವನ್ನು ಮಾಡುವ ಶುಭ ಸಂಕಲ್ಪವನ್ನು ಮಾಡಿದ್ದಾಗಿಯೂ, ಅವರು ತಮ್ಮ ಒಪ್ಪಿಗೆಯನ್ನು ತಿಳಿಸಬೇಕಾಗಿಯೂ ಹೇಳಿದರು ಅವರು ಒಪ್ಪಿಗೆಯನ್ನೆಂತು ಹೇಳುವದು. ಇಬ್ಬರೂ ಮುಗ್ಧ ಹಸುಗೂಸುಗಳು ತಂದೆಯ ಅಣ್ಣನ ಮುಖಗಳನ್ನು ನೋಡುತ್ತ ಅಶ್ರುಧಾರೆಯೆರೆದರು. ನಾವು ಅವರನ್ನು ಒದಿಗೆ ಕರೆದು ಅಪ್ಪಿಕೊಂಡು ಸಂತಯಿಸಿದೆವು.

ಮರುದಿನ ನಾವಿಬ್ಬರೂ ಕೂಡಿ ಪರಮಾತ್ಮನ ಸಾಕ್ಷಿಯಾಗಿ ಆ ದೇವ ಮಂದಿರದಲ್ಲಿ ಅವರ ವಿವಾಹವನ್ನು ಸಾಂಗಗೊಳಿಸಿದೆವು. ಅವರು ಸತಿ-ಪತಿಯರಾದರು.

ನಾವಿಬ್ಬರು ಮುಕ್ತಜೀವಿಗಳಾದೆವು. ಒಂದೆರಡು ವರ್ಷ ಮಾತ್ರ ನಾವಂದಿರು ಮಗ ಸೊಸೆಯಂದಿರೊಂದಿಗೆ ಮನೆಯಲ್ಲಿ ಇದ್ದು ಅವರನ್ನು

ಡಾರಿಗೆ ಹಚ್ಚಿದರು. ಮೊಮ್ಮಗನು ಹುಟ್ಟಿ ಅಂಬೇಗಾಲಿಟ್ಟು ತೊದಲ್ ನುಡಿಗಳಿಂದ ಅಜ್ಜಂದಿರನ್ನು ಸಂತಸಗೊಳಿಸುತ್ತಿರುವಂತೆಯೇ ಒಂದು ದಿನ ಪೂಜಾ ಕಾರ್ಯವನ್ನು ಮುಗಿಸಿಕೊಂಡು ಮನೆಗೆ ಬಂದು ಮಗ, ಸೊಸೆ, ಮೊಮ್ಮಗನನ್ನು ಕರೆಯಿಸಿಕೊಂಡು ಎಲ್ಲರನ್ನೂ ಕಣ್ತುಂಬ ನೋಡಿದರು. ನಿಶ್ಚಿತ ಧ್ವನಿಯಲ್ಲಿ ತಾವು ಹಲವು ವರ್ಷ ಯಾತ್ರೆಯಲ್ಲಿರುವದಾಗಿ ತಿಳಿಸಿದರು. ಮೊಮ್ಮಗನು ಪ್ರಾಪ್ತ ವಯಸ್ಕನಾದಾಗ ಬಂದು, ಅವನ ದೀಕ್ಷಾಕಾರ್ಯವನ್ನು ಮಾಡುವದಾಗಿ ವಚನವನ್ನಿತ್ತು, ಎಲ್ಲರಿಗೂ ಆಶೀರ್ವದಿಸಿ, ನಾಲ್ಕು ಜಪ ಮಾಲೆಗಳನ್ನು ಹೊರಗೆ ತೆಗೆದು, ಮೊಮ್ಮಗನಿಗೆ ತಾವೇ ಒಂದನ್ನು ಕೊರಳಲ್ಲಿ ಹಾಕಿ, ಉಳಿದಿಬ್ಬರಿಗೆ ಎರಡನ್ನು ಒಪ್ಪಿಸಿ, ಕೊನೆಯದನ್ನು ನನ್ನ ತಂಗಿಯ ವಶಕ್ಕಿತ್ತು, ಅದನ್ನು ನನಗೆ ಮುಟ್ಟಿಸಲು ತಿಳಿಸಿದರು. ಆದರೆ....ಅದನ್ನು ಧರಿಸುವವರು ತಮ್ಮ ಜೀವಮಾನದಲ್ಲಿ ಯಾವ ಹಿಂಸೆಯನ್ನೂ ಮಾಡಕೂಡ ದೆಂಬ ಕಟ್ಟಪ್ಪಣೆ. ಹಿಂಸೆಯನ್ನು ಮಾಡುವ ಸಮಯ ಬಂದಾಗ ಆ ಮಾಲೆ ಗಳನ್ನು ಗಂಗಾರ್ಪಣ ಮಾಡಬೇಕಾಗಿ ತಿಳಿಸಿದರು. ಹಾಗೆಯೇ "ನಿಂತ ಕಾಲುಗಳ ಮೇಲೆಯೇ" ಮನೆಬಿಟ್ಟು ಗೌರೀ ಶಂಕರಾಭಿಮುಖವಾಗಿ ತೆರ ಳಿದರು.

ನಾನು ತಂಗಿಯ ಮದುವೆ ಮಾಡಿ, ಇಡೀ ರಾತ್ರಿ ಶಿವರಾತ್ರಿಯನ್ನು ದೇವ ಸಮ್ಮುಖದಲ್ಲಿ ಮಾಡಿ, ಮರು ದಿನ ಅವರನ್ನು ಬಿಟ್ಟು ಬಂದಿದ್ದೆನು. ಮೂರನೆಯ ವರ್ಷ ಮಾವಂದಿರ ಯಾತ್ರಾ ವಾರ್ತೆಯನ್ನು ಕೇಳಿ ತಂಗಿಯ ಮನೆಗೆ ಹೋಗಿ ಮಾವಂದಿರು ಕೊಟ್ಟ--ಆಶೀರ್ವದಿಸಿದ-ಜಪಮಾಲೆಯನ್ನು ಧರಿಸಿಬಂದಿದ್ದೇನೆ. ನಾನು ಯಾವ ಹಿಂಸೆಯನ್ನು ಇಷ್ಟು ದಿನ ಮಾಡಿಲ್ಲ. ಹಿಂಸೆ ಮಾಡಬಹುದಾಗಿದ್ದ ಅನೇಕ ಸಮಯಗಳನ್ನು ನಾನು ಕೈ ಬಿಗಿ ಹಿಡಿದು ಮುಂದೂಡಿದ್ದೇನೆ. ಅಂತಹ ಸಮಯಗಳಲ್ಲಿ ಇನ್ನು ಮುಂದೆ ನಾನು ಹೇಳುವ ಎರಡು ಸಮಯಗಳು ಅತಿ ಪರೀಕ್ಷಾ ಸಮಯಗಳು. ನನ್ನ ಮನುಷ್ಯತ್ವ ವನ್ನೇ ಗೊತ್ತಿಗೆ ಹಚ್ಚಲು ಹಾತೊರೆಯುತ್ತ ಮುಂದೆ ಬಂದ ಸಮಯಗಳು. ನಾನು ಕೇವಲ ನನ್ನ ಋಷಿಸದೃಶ ತಾಯ್ತಂದೆ ಮಾವಂದಿರನ್ನು ಸ್ಮರಿಸಿ ಕೊಂಡು ಉಳಿದುಕೊಂಡು ಬಂದಿದ್ದೇನೆ.

ಮಹಾಮಾನ್ಯರೇ, ತಾವು ನ್ಯಾಯಸ್ಥಾನದಲ್ಲಿ ಕುಳಿತುಕೊಂಡಿದ್ದೀರಿ. ನನ್ನ ಎಲ್ಲ ಮಾತುಗಳನ್ನು ಕೇಳಿಕೊಂಡು ತಾವು ಮುಕ್ತ ಮನಸ್ಸಿನಿಂದ ನನ್ನ ಜೀವನದ ಅಧಿದೇವತೆಗಳಾಗಿ, ನನ್ನ ಹಿಂದಿನ ಜೀವನವನ್ನು ಕುರಿತು ನಿರ್ಣಯವನ್ನು ಕೊಡಿರಿ. ಮುಂದಿನ ಜೀವನಕ್ಕೆ ಮಾರ್ಗದರ್ಶನ ಮಾಡಿರಿ. ನನ್ನ ಮಾತುಗಳನ್ನು ಮುಂದುವರಿಸಬಹುದೋ ?"

## (೧೫)

ನ್ಯಾಯಾಲಯದಲ್ಲಿ ಈ ಪ್ರಶ್ನೆಯಿಂದ ಎಲ್ಲರೂ ಸ್ವಪ್ನಲೋಕವನ್ನು ಬಿಟ್ಟು ವಾಸ್ತವಲೋಕಕ್ಕೆ ಬಂದರು. ಆಗ ಮಧ್ಯಾಹ್ನ ಮೂರುಮುಕ್ಕಾಲು ಗಂಟೆ.

ಏಕಾಗ್ರ ಚಿತ್ತದಿಂದ ಆಲಿಸುತ್ತ ಕುಳಿತುಕೊಂಡ ನ್ಯಾಯಾಧೀಶರು ತಾವು ಅನುಭವಿಸುತ್ತಿದ್ದ ಹೃದಯದ ತಲ್ಲಣವನ್ನು ಅತ್ಯಂತ ದಯಾಮಯವಾದ ಒಂದು ಉಸಿರಿನೆಳೆತದಿಂದ ತಾತ್ಪೂರ್ತಿಕವಾಗಿ ಉಪಶಮನಗೊಳಿಸಿದರು. ಸೂಚ್ಯವಾದ ನಾಲ್ಕಾರು ಮಾತುಗಳಲ್ಲಿ ಮುಂದಿನ ಕಾರ್ಯನಿರ್ವಹಣೆಗೆ ಆವಶ್ಯ ಆಜ್ಞೆಗಳನ್ನಿತ್ತು ಅಂದಿನ ವಿಚಾರಣೆಯನ್ನು ಮೂರುಗಂಟೆ ಕಾಲ ಮುಂದೆ ಹಾಕಿ, ವಿಚಾರಣೆಯನ್ನು ಪುನಃ ಅಂದು ಸಾಯಂಕಾಲ ೭ ಗಂಟೆಯಿಂದ ೧೦ ಗಂಟೆಯ ತನಕ ನಡೆಯಿಸುವದಾಗಿ ತಿಳಿಸಿ, ವಿಶ್ರಾಂತಿ ಊಟ ಉಪಹಾರಗಳಿಗಾಗಿ ಮನೆಗೆ ತೆರಳಿದರು. ಸಾಧು ಮಹಾಪುರುಷನು ಮಕ್ಕಳ ವಸತಿ ಗೃಹದಲ್ಲಿ ತನ್ನ ವಿಶ್ರಾಂತಿ ವ್ಯವಸ್ಥೆಯನ್ನು ಮಾಡಿಕೊಳ್ಳ-ಬಹುದೆಂದು ಆಜ್ಞೆಯಾಗಿತ್ತು. ಅದರಂತೆ ನೋಡಿಕೊಳ್ಳಲು ನಮ್ಮ ಸಹಾಯಕರಿಗೆ ತಿಳಿಸಿ ನಾವೆಲ್ಲರೂ ವಿಶ್ರಾಂತಿಗಾಗಿ ತೆರಳಿದೆವು. ಸಾಯಂಕಾಲಕ್ಕಾಗಿ ಮುಂದಿನ ವ್ಯವಸ್ಥೆ ಮಾಡಲು ಪುನಃ ನಮ್ಮ ಎಲ್ಲ ಅಧಿಕಾರಿ ವರ್ಗವು ಆರುಮುಕ್ಕಾಲು ಗಂಟೆಗೆ ಸಿದ್ಧರಿರಬೇಕಷ್ಟೇ.

ನಮ್ಮ ಕಾರ್ಯದಲ್ಲಿ ಮುಕ್ಕಾಲುಪಾಲು ಕಾರ್ಯವನ್ನು ಸಾಧು ಮಾಡಿದ್ದನ್ನು ನಾವು ಕಂಡಿದ್ದೆವು. ಪುನಃ ಉಳಿದ ಕಾಲುಭಾಗವನ್ನು ಅವನೇ ಮುಗಿಸುವನೆಂಬುದೂ ನಮಗೆ ಖಚಿತವಾಗಿತ್ತು.

ಆದರೆ........ಹರಪ್ರಸಾದನ ಮುಖದ ಮೇಲೆ ಮಾತ್ರ ನಾವು ಕಾಣಬಹುದಾಗಿದ್ದ ಹರ್ಷದ ಬುಗ್ಗೆ ಚಿಮ್ಮುತ್ತಿದ್ದಿಲ್ಲ ಅವನ ಮುಖವು ಅತ್ಯಂತ ಪ್ರಶಾಂತವಾಗಿತ್ತು. ಅಲ್ಲಿ ನೋಡಿ ನಾವು ಅವನ ಯಾವ ಹೃದ್ಗತವನ್ನು ತಿಳಿದುಕೊಳ್ಳಲು ಸಾಧ್ಯವಿರಲಿಲ್ಲ. ನಾನು ಔಪಚಾರಿಕವಾಗಿ ಅವನ ಬಳಿ ಹೋಗಿ ಅವನ ಬೆನ್ನ ಮೇಲೆ ಕೈ ಆಡಿಸಿದೆನು. ಅವನು ಮುಖವನ್ನೆತ್ತಿ ನನ್ನ ಕಣ್ಣುಗಳಲ್ಲಿ ಕಣ್ಣಿಟ್ಟು ನನ್ನ ಅಂತರಾಳದ ಇಂಗಿತವನ್ನೆ ತಿಳಿವಂತೆ ಪ್ರಶ್ನಿಸಿದನು. ಈ ಮೂಕ ಅಭಿನಯದಲ್ಲಿ ಅವಿಶ್ವಾಸ ಮಾತ್ರ ಕಂಡುಬರಲಿಲ್ಲ. ಅಂತೆಯೇ ನಾನು ಅವನನ್ನು ಬಿಗಿದಪ್ಪಿ, ಮೂಕ ಅಭಿನಯದಿಂದ ಅಭಯವನ್ನು ಹೇಳಿದೆನು. ಅಭಯ ಸೂಚಕವಾಗಿ ನಾನು ನನ್ನ ಎದೆಯ ಮೇಲೆ ಕೈ ಇಟ್ಟು ಹೇಳಿದುದನ್ನು ಕಂಡ ಮೇಲೆಯೇ ಅವನ ಮುಖದಲ್ಲಿ ಎಳೆನಗೆ ಮಿಂಚಿತು. ನಾನು ಮನೆಯ ಕಡೆಗೆ ನಿಶ್ಚಿಂತನಾಗಿ ಸಾಗಿದೆನು. ಹೋಗುವ ಮುನ್ನ ಸಹಾಯಕರಿಗೆ ನಿಶ್ಚಿತ ಆಜ್ಞೆಗಳನ್ನು ಕೊಟ್ಟು ಹೋದೆನು ಮೂರು ಗಂಟೆಯ ಅವಧಿಯಲ್ಲಿ ನಮ್ಮ ದೇಶದಲ್ಲಿ ಸಾಕಷ್ಟು ಅಸಹ್ಯ ಘಟನೆಗಳು ಸಂಭವಿಸುವದಿಲ್ಲವೆನ್ನುವದಕ್ಕೆ ಎಲ್ಲಿಯೂ ಆಧಾರವಿಲ್ಲವಷ್ಟೆ. ಹೊಳೆಯಲ್ಲಿ ಹುಣಸಿ ಹಣ್ಣನ್ನು ತೊಳೆಯುವದೂ. ನೂತದ್ದನ್ನು ಹಂಜಿ ಮಾಡುವದೂ ನಮ್ಮ ದೇಶಕ್ಕೆ ಹೊರತಾದುದೇನಲ್ಲವಷ್ಟೆ. ನಮ್ಮ ಎಚ್ಚರಿಕೆಯಲ್ಲಿ ನಾವಿರಲೇಬೇಕು.

ನಾವು ಮರಳಿ ಬಂದಾಗ ೬|| ಗಂಟೆ. ದೀಪದ ವ್ಯವಸ್ಥೆ ಮಾಡಿಸಿ ನ್ಯಾಯಾಲಯಕ್ಕೆ ಅವಶ್ಯಕ ಅನುಕೂಲತೆಗಳನ್ನೂ ಸಜ್ಜುಗೊಳಿಸಿ, ನಮ್ಮ ಸಹಾಯಕರು ತಮ್ಮ ತಮ್ಮ ಊಟ ಉಪಚಾರಗಳನ್ನು ಸರತಿಯ ಪ್ರಕಾರ ಮುಗಿಸಿಕೊಂಡು ಬಂದಿದ್ದರಲ್ಲದೆ, ವಸತಿಗೃಹದ ಎಲ್ಲ ಮಕ್ಕಳ ಸಾಯಂಕಾಲದ ಊಟ ಉಪಚಾರಗಳನ್ನು ಮುಗಿಸಿ ಸಿದ್ಧರಾಗಿದ್ದರು. ಇಂದು ನ್ಯಾಯಾಲಯ ಇನ್ನು ಹೆಚ್ಚು ಸಮಯ ನಡೆದುದು ನಮ್ಮ ಕಾರ್ಯಕ್ರಮಗಳ ಇತಿಹಾಸ-

ದಲ್ಲಿಯೇ ಅಪೂರ್ವವಾಗಿತ್ತು. ಎಲ್ಲರ ಮುಖಗಳಲ್ಲಿಯೂ ಒಂದು ಉತ್ಸುಕತೆ ಮೂಡಿತ್ತು.

ಬಾಲಿಕೆ ಸುಂದರಾ ಮತ್ತು ಹರಪ್ರಸಾದ ಇವರನ್ನು ನಮ್ಮ ಕೊಠಡಿಯಲ್ಲಿ ಉಳಿಸಿಕೊಂಡು, ಉಳಿದೆಲ್ಲ ಮಕ್ಕಳನ್ನು ಪ್ರಾರ್ಥನಾಮಂದಿರಕ್ಕೆ ಮೆಲುದನಿಯ ಪ್ರಾರ್ಥನೆಗಾಗಿ ಇಬ್ಬರು ಸಹಾಯಕರೊಂದಿಗೆ ಕಳಿಸಿದೆವು

ಏಳು ಗಂಟೆಗೆ ಸರಿಯಾಗಿ ನ್ಯಾಯಾಧೀಶರು ನ್ಯಾಯಮಂದಿರವನ್ನು ಪ್ರವೇಶಿಸಿದರು. ಸಾಧುಪುರುಷನ ಆತ್ಮಕಥಾ ಶ್ರವಣಕ್ಕಾಗಿ ಅಧಿಕಾರೀ ವರ್ಗವು ಕಾಯ್ದು ಕುಳಿತಿತು. ನ್ಯಾಯಾಲಯದ ಕಾರ್ಯದರ್ಶಿಗೆ ಸಾಧುವಿನ ಮುಂದಿನ ವೃತ್ತಾಂತವನ್ನು ನಿಶ್ಚಿತ ದಿನಾಂಕ ಮತ್ತು ಸಮಯಗಳ ವಿವರಗಳೊಂದಿಗೆ ಬರೆದುಕೊಳ್ಳಲು ತಿಳಿಸಿ ನ್ಯಾಯಾಧೀಶರು ನಮ್ಮ ಕಡೆಯಿಂದ ಬಾಲಿಕೆ ಸುಂದರಾ ಮತ್ತು ಬಾಲಕ ಹರಪ್ರಸಾದ ಇವರ ಸಂಬಂಧವಾಗಿ ನಾವು ಒಪ್ಪಿಸಬೇಕಾದ ನಮ್ಮ ಪ್ರಕರಣಗಳ ನಿಶ್ಚಿತ ಫಲಿತಾಂಶ ಪತ್ರಗಳನ್ನು ಅಪೇಕ್ಷಿಸಿದರು. ಎರಡೂ ಪತ್ರಗಳನ್ನು ನಾನು ಪುನಃ ಐದು ನಿಮಿಷಗಳಲ್ಲಿ ಪರಿಶೀಲಿಸಿ, ಒಪ್ಪಿಸಿದೆನು. ನಮ್ಮ ಪತ್ರಗಳನ್ನು ತಮ್ಮೆದುರು ಜತನದಿಂದ ಇಟ್ಟುಕೊಂಡು, ಎರಡೂ ಮಕ್ಕಳನ್ನು ನ್ಯಾಯಾಲಯಕ್ಕೆ ಕರೆಯಿಸಿಕೊಂಡರು. ಆ ಮಕ್ಕಳನ್ನು ಉದ್ದೇಶಿಸಿ ನ್ಯಾಯಾಧೀಶರು ಮುಂದಿನಂತೆ ಮಾತಾಡಿದರು :

"ಮಕ್ಕಳೇ, ನಿಮ್ಮ ಸಂಬಂಧ ಎಲ್ಲ ವಿಷಯವನ್ನು ತಿಳಿಸಿ ಈ ಅಧಿಕಾರಿಗಳು ತಮ್ಮ ಅಭಿಪ್ರಾಯ ಪತ್ರಗಳನ್ನು ಒಪ್ಪಿಸಿದ್ದಾರೆ- ನಿಮ್ಮ ಕಡೆಯವರೊಬ್ಬರು ನಿಮ್ಮ ವಿಷಯವಾಗಿ ಇನ್ನೂ ಬಹಳ ವಿಷಯ ತಿಳಿಸುವವರಿದ್ದಾರೆ. ಆದರೆ ನ್ಯಾಯಾಲಯಕ್ಕೆ ನಿಮ್ಮೊಂದಿಗೆ ನಾಲ್ಕು ಮಾತುಗಳ ಅಪ್ತಾಲೋಚನೆ ಮಾಡಿ ಮುಂದಿನ ನಿರ್ಣಯ ಕೊಡುವ ಮನಸ್ಸಾಗಿದೆ. ನಿಮಗೆ ಏನಾದರೂ ಹೊಸದನ್ನು ಹೇಳುವದಿದೆಯೇ ?"

ಇದಕ್ಕೆ ಪ್ರತಿಯಾಗಿ ಹರಪ್ರಸಾದನು ದಿಟ್ಟತನದಿಂದ ಉತ್ತರವಿತ್ತನು : "ಪಿತಾ ಸಮಾನರೆ! ನಾನು ಹೇಳಬೇಕಾದುದೆಲ್ಲವನ್ನೂ ತಮ್ಮ ಬದಿಯಲ್ಲಿರುವ

ನಮ್ಮ ಅಧಿಕಾರಿಗಳಿಗೆ ತಿಳಿಸಿದ್ದೇನೆ. ಅವರು ನನ್ನ ಬಗೆಗೆ ಬರೆದು ಕೊಟ್ಟಿದ್ದಿಲ್ಲದಕ್ಕೂ ನನ್ನ ಸಮ್ಮತಿ ಇದೆ. ಅದೇ ತಮ್ಮ ನಿರ್ಣಯಕ್ಕೆ ಆಧಾರವಾಗಿದ್ದರೆ ನನಗೆ ಸಂತೋಷವಾಗುವದು."

ಬಾಲಿಕೆ ಏನು ಮಾತನಾಡದವಳಾಗಿ, ಒಮ್ಮೆ ನಮ್ಮ ಸಹೋದ್ಯೋಗಿನಿ ಅಧಿಕಾರಿಣಿಯ ಕಡೆಗೆ, ಒಮ್ಮೆ ನನ್ನ ಕಡೆಗೆ ಒಮ್ಮೆ ನ್ಯಾಯಾಧೀಶರ ಕಡೆಗೆ, ನೋಡಿ ತಲೆ ತಗ್ಗಿಸಿ ನಿಂತಳು.

ನನ್ನ ಕಡೆಗೆ ನ್ಯಾಯಾಧೀಶರು ನೋಡಿ "ಹೀಗೇಕೆ?" ಎಂದರು. ನಾನು ಹೇಳಿದೆನು : ಅವಳು "ತನ್ನ ಸರ್ವಸ್ವವನ್ನೂ ವಿಶ್ವಾಸದಿಂದ ನ್ಯಾಯ ಸ್ಥಾನಕ್ಕೆ ಒಪ್ಪಿಸಿದ್ದಾಳೆ. ತಾವು ಪೂರ್ವಾಪರವನ್ನು ಗ್ರಹಿಸಬಲ್ಲಿರಿ. ಮಾರ್ಗದರ್ಶನ ಮಾಡಬಲ್ಲಿರಿ. ಎಂಬುದೇ ಅವಳ ಅಭಿಪ್ರಾಯ." ಆಗ ನ್ಯಾಯಾಧೀಶರು "Good Heavens! ಆ ಸಾಧುವಿಗೆ ಒಳಗೆ ಬಿಡಿರಿ. ಅವನು ಹೇಳಿಕೆಯನ್ನು ಮುಗಿಸಲಿ. ಮುಂದೆ ನಮ್ಮ ನಿರ್ಣಯ!" ಎಂದರು.

## (೧೬)

ಬಾಲಕ ಹರಪ್ರಸಾದ ಮತ್ತು ಬಾಲಿಕೆ ಸುಂದರಾ ಅವರನ್ನು ಮಕ್ಕಳ ಕೊಠಡಿಗೆ ಕಳಿಸಿಕೊಡಲಾಯಿತು. ಸಾಧು ಮಹಾರಾಜ ನ್ಯಾಯಾಲಯವನ್ನು ಪ್ರವೇಶಿಸಿದನು. ನ್ಯಾಯಾಧೀಶರು ಸಾಧುವಿಗೆ ಸ್ವಲ್ಪ ಸಂಕ್ಷಿಪ್ತವಾಗಿ ಆದರೂ ಎಲ್ಲ ವಿಷಯಗಳು ಬರುವಂತೆ ತನ್ನ ಹೇಳಿಕೆಯನ್ನು ಕೊಡಲು ತಿಳಿಸಿದರು. ಸಾಧುವಿನ ಮುಖದ ಮೇಲೆ ಗೆಲುವು ತುಂಬಿತ್ತು. ಮುಂಜಾನೆ ಇದ್ದ ಎದೆಗುದಿ ಇದ್ದಿರಲಿಲ್ಲ ನ್ಯಾಯಾಲಯವು ತೀರ ಕಠೋರವಾದ ನಿರ್ಣಯವನ್ನು ತನ್ನ ವಿಷಯದಲ್ಲಿ ತೆಗೆದುಕೊಳ್ಳಲಿಕ್ಕಿಲ್ಲವೆಂದು ಅವನು ಎಂತೋ ಭರವಸೆ ತಳೆದಂತಿತ್ತು. ಸಂಕ್ಷಿಪ್ತ ಆದರೂ ಪರಿಪೂರ್ಣ ಹೇಳಿಕೆಯನ್ನು ಕೊಡುವ

ಆಜ್ಞೆಯನ್ನು ನ್ಯಾಯಾಧೀಶರು ಇತ್ತಾಗ, ಸಾಧು ತುಸು ದಿಟ್ಟತನದಿಂದ ಕೊಟ್ಟ ಉತ್ತರದಿಂದ ನ್ಯಾಯಾಲಯವು ನಗೆಗಡಲಿನಲ್ಲಿ ತೇಲಿತು:

"ಮಾನ್ಯರೆ, ನಾನು ನಿಂತಿರುವದು ನ್ಯಾಯಾಲಯದಲ್ಲಿ. ದೇವಾಲಯದಲ್ಲಿ ಅಲ್ಲ. ದೇವಾಲಯದಲ್ಲಿ ಪ್ರಾರ್ಥನೆ ಹೆಚ್ಚು ಸಲ್ಲಿಸಿದಂತೆ ನನಗೆ ಹೆಚ್ಚಿನ ಪ್ರತಿಫಲ. ತಮ್ಮಲ್ಲಿ ನಾನೊಬ್ಬನೇ ಭಕ್ತನಲ್ಲ. ನನ್ನಂತಹ ಸಾವಿರ ಜನರ ವಿಚಾರ ತಾವು ಕೇಳಿ ನಿರ್ಣಯಿಸಬೇಕು. ನಾನಿಲ್ಲಿಗೆ ಬಂದ ಮೇಲೆ ಸರಕಾರದ ಆಳವಿಗೆ ಬಂದವನ ಇತಿಮಿತಿ ತಿಳಿದುಕೊಂಡಿದ್ದೇನೆ." ಎಂದನು.

ನಗೆಯನ್ನು ಸ್ತಿಮಿತಕ್ಕೆ ತಂದುಕೊಂಡ ನ್ಯಾಯಾಧೀಶರು "ಸರಿ ! ಸರಿ ! ಮುಂದೆ ಸಾಗಲಿ ನಿನ್ನ ರಥ" ಎಂದರು

ಸಾಧು ನ್ಯಾಯಾಲಯದ ನಡುವೆ ಯಾವ ಆಸರವಿಲ್ಲದೆ ನಿಂತಿದ್ದನು ಆಸರವಿಲ್ಲದೆ ಅವನು ಮುಂದುವರಿಯುವದು ಸಾಧ್ಯವಿಲ್ಲನೆಂದು ಅವನ ಹಾವಭಾವಗಳಿಂದ ನಾನು ತಿಳಿದುಕೊಂಡೆನು. ಅವನು ಒಮ್ಮೆ ಎದೆಗೆ "ಅಪ್ಪುಗೈ ಹಚ್ಚಿ ನಿಂತು ಕೊಂಡನು. ಒಮ್ಮೆ ಬೆನ್ನ ಹಿಂದೆ ಕೈ ಕಟ್ಟಿಕೊಂಡು ನಿಂತು ನೋಡಿದನು. ಮತ್ತೊಮ್ಮೆ ಎರಡೂ ಕೈಗಳನ್ನು ಜೋಲು ಬಿಟ್ಟು ತೊಡೆಗೆ ಹಚ್ಚಿ ನಿಂತು ನೋಡಿದನು. ಎಂತಾದರೂ ಅವನಿಗೆ ಹಿಡಿದು ಬಿಟ್ಟಂತಾಗಿದ್ದುದು ತಪ್ಪಲಿಲ್ಲ. ಕೊನೆಗೆ ನಾನು ನನ್ನ ಬದಿಯಲ್ಲಿದ್ದ ಕುರ್ಚಿಯನ್ನು ಅವನೆದುರು ಸರಿಸಿದೆನು. ಅವನು ಕುರ್ಚಿಯ ಹಿಂಬದಿಯ ಮೇಲೆ ಕೈ ಇಟ್ಟು ನಿಂತು ಸಮಾಧಾನದ ನಿಟ್ಟುಸಿರುಬಿಟ್ಟು ತನ್ನ ಮಾತುಗಳನ್ನು ಪ್ರಾರಂಭಿಸಿದನು.

"ಮಾನ್ಯರೆ, ನನ್ನ ಊರಿನಲ್ಲಿ ನಾನು ಹೊಲವನ್ನು ಕೊಳ್ಳುವ ಪ್ರಸಂಗ ಬಂದಾಗ ನನಗೊಬ್ಬ "ಎದುರಾಳಿ" ಅಡ್ಡಬಂದನೆಂದು ನಾನು ಹೇಳಿದ್ದಿಲ್ಲವೆ? ಅವನು, ನಾನು ನನ್ನ ತಂಗಿಯನ್ನು ಬಿಟ್ಟು ಹಿಮಾಲಯದಿಂದ ಮೊದಲಿಗೇ ಹಿಂದಿರುಗಿ ಬಂದಾಗ, ಊರಿನ ಜನರನ್ನು ಕೂಡಿಸಿ ದೇವಮಂದಿರದಲ್ಲಿ ಸಭೆ ಕರೆದಿದ್ದನು. ಅಂದಿನ ಸಭೆಯಲ್ಲಿ ಹಿರಿಯರು ಸಾರಾಸಾರ ವಿಚಾರಮಾಡಿ, ನಾನು ಗುಡಿಯ ಪೂಜಾರಿಯಾಗಿ ಇರಬೇಕೇ ಅಥವಾ ಊರಲ್ಲಿ ಒಕ್ಕಲಿಗನಾಗಿ

ಇರಬೇಕೇ ಎಂಬುದರ ಬಗೆಗೆ ನಿರ್ಣಯ ಕೊಡಬೇಕು ಎಂಬುದನ್ನು ನನ್ನ "ಎದುರಾಳಿ" ಸ್ಪಷ್ಟಪಡಿಸಿದನು.

ನಾನು ಹಿಮಾಲಯ ಬಿಟ್ಟು ಬರುವಾಗ ನನ್ನ ತಂಗಿಯ ಮಾವಂದಿರು, ಮುಂಬರುವ ಈ ಗತ್ತುಗಾರಿಕೆಗೆ ಸರಿಯಾದ ಗರಡಿಯನ್ನು ತಿಳಿಸಿದ್ದಲ್ಲದೆ, ಜಗತ್ತಿನ ಇಂದಿನ ವ್ಯಾಪಾರದ ಬಗೆಗೆ ಲೌಕಿಕಕ್ಕೆ ಉಪಯುಕ್ತವಾಗುವ ಎರಡು ಮಾತುಗಳನ್ನು ಮನಸ್ಸಿಗೆ ಖಚಿತವಾಗುವಂತೆ ತಿಳಿಸಿದ್ದರು. ಒಂದು ಮಾತನ್ನು ಮಾತ್ರ ಅವರು ಧರ್ಮ ಸಂಕಟಕ್ಕೆ ಬಿದ್ದು ನನಗೆ ತಿಳಿಸಿರಲಿಲ್ಲ. ಅದೇ ನನ್ನ ಧನ ಸಂಗ್ರಹವನ್ನು ಕುರಿತಾದುದು. ಅದೊಂದು ಮಾತನ್ನು ಅವರು ಅಂದೇ ನನಗೆ ಹೇಳಿಬಿಟ್ಟಿದ್ದರೆ, ತದನಂತರ ನಡೆದ ಅನೇಕ ಘಟನೆಗಳು ನನ್ನಿಂದ ಘಟಿಸುತ್ತಿರಲಿಲ್ಲ.

ನಿರ್ಣಯ ಕೊಡುವ ಮೊದಲು ಊರ ಹಿರಿಯರು ನನಗೊಂದು ಪ್ರಶ್ನೆ ಮಾಡಿದರು. "ನೀನೇನು ಪೂಜಾರಿಯಾಗಿ ಊರಲ್ಲಿರಲು ಬಯಸುವಿಯಾ? ಅಥವಾ ಒಕ್ಕಲಿಗನಾಗಿ ಇರಲು ಬಯಸುವಿಯಾ ?" ಎಂದು.

ನನ್ನ ಬತ್ತಳಿಕೆಯಿಂದ ಬಾಣವನ್ನು ಹಿರಿದು ಸಿದ್ಧನಾಗಿಯೇ ನಾನು ನಿಂತಿದ್ದೆನು. ನಾನು ಊರಿಗೆ ಬಂದು ಮುಖಮಾರ್ಜನೆ ಮಾಡಿ, ಸ್ವಲ್ಪ ಹೊತ್ತು ಮಂದಿರದಲ್ಲಿ ಗೋಡೆಗೆ ಒರಗಿ ವಿಶ್ರಮಿಸಿರಲಿಲ್ಲ. ಅರ್ಧ ಘಂಟೆಯಲ್ಲಿಯೇ ಊರಿಗೆ ಊರೇ ಬಂದು, ಗುಡಿಯ ಒಳಗೆ ಹೊರಗೆ ನೆರೆದು ಮುತ್ತಿ ನಿಂತಿತ್ತು. ನನ್ನ ಸ್ಥಳದಲ್ಲಿ ಇಷ್ಟು ದಿನ ದೇವಪೂಜೆಯನ್ನು ಮಾಡುತ್ತಿದ್ದ ನಮ್ಮ ಮಿತ್ರರು ಬಂದು ನನ್ನನ್ನು ಎಬ್ಬಿಸಿದಾಗಲೇ ನನಗೆ ಈ ಮುತ್ತಿಗೆಯ ಅರಿವು. ಪೂರ್ವಪರಿಚಯ ಮನುಷ್ಯನಿಗೆ ಒಂದು ಧೀರ ಕವಚ. ನನಗೆ ಹೀಗಾಗಬಹುದೆಂಬ ಅರಿವು ಇದ್ದುದರಿಂದ ನಾನು ನನ್ನ ಮುಖಮುದ್ರೆಯಲ್ಲಿ ಯಾವ ವ್ಯತ್ಯಾಸವನ್ನು ವ್ಯಕ್ತಪಡಿಸಲಿಲ್ಲ. ಸಾವಧಾನದಿಂದ ಎಚ್ಚತ್ತು ರೂಢಿಯಂತೆ ಬಂದ ಹಿರಿಯರನ್ನು ಸ್ವಾಗತಿಸಿ ಅವರನ್ನು ಮಂದಿರದಲ್ಲಿ ಕುಳ್ಳಿರಿಸಿದೆನು. ಅವರಿಗೆ ನನ್ನ ತಂಗಿಯ ಮದುವೆಯ ಸಂಗತಿಯನ್ನು ತಿಳಿಸಿ, ಆ ಕಾರ್ಯವನ್ನು ನಾವು ಹರದ್ವಾರದ ಮುಖ್ಯ ಋಷಿಪುಂಗವರ

ಇಚ್ಛಾಪೂರ್ತಿಗಾಗಿ ಮಾಡಲೇಬೇಕಾಯಿತೆಂಬದನ್ನು ವಿವರಿಸಿ ಹೇಳಿದೆನು. ಊರಿನ ಬಹುಜನ ಅದನ್ನು ಕೇಳಿ ತಮ್ಮ ಹೃತ್ಪೂರ್ವಕ ಸಂತಸವನ್ನು ವ್ಯಕ್ತಗೊಳಿಸಿದರು. ಒಬ್ಬನೇ ಒಬ್ಬನು ಚಡಪಡಿಸುತ್ತಿದ್ದುದನ್ನು ಅವನ ಮುಖವು ಕೂಗಿ ಹೇಳಿತು. ಅವನೇ ನನ್ನ "ಎದುರಾಳಿ." ಬಾಯಿಬಿಟ್ಟು ಹೇಳಿಯೇ ಬಿಟ್ಟ—ಹೃದಯದಲ್ಲಿ ಹಿಡಿದಿಡಲಾಗದೆ : "ಇವನು ವಂಚಕ. ಒಬ್ಬೊಂಟಿಗನಾಗಿ ನಮಗೆಲ್ಲ ಬಂಟನಾಗಲು ತನ್ನ ಮೈಮೇಲಿನ ಭಾರವನ್ನು ಇಳಿಸಿಕೊಂಡು ಬಂದಿದ್ದಾನೆ. ಧನಪಾಲನಿಗೆ ವಂಚಿಸುವದು ಇವನಿಗೇಕೆ ಇವನ ತಂದೆ ಇವನ ತಾತ ಮುತ್ತಾತರಿಗೆ ಸಾಧ್ಯವಿಲ್ಲ". ಎಂದು ಕೂಗಾಡಿದನು. ತಹಿರಿಯರಲ್ಲಿ ಒಬ್ಬರು, ಈ "ವಂಶಾವಳಿಯ ಹಿತಚಿಂತನವನ್ನು" ಕೇಳಿ ಸಿಡಿಮಿಡಿಗೊಂಡು "ಮುಚ್ಚು ಬಾಯಿ ಮೂರ್ಖ, ಬಡ ಉಪಾಸಕರು ಶಿವಾಧೀನರು. ಅವರ ಮಾತು ಎತ್ತಿದರೆ ನಿನ್ನ ನಾಲಿಗೆ ಸೀಳೀತು. ಎಂತಾದರೂ ಬಡ ಮಗಳು ಕಲ್ಯಾಣವನ್ನು ಪಡೆದಳು. ನಾವು ನಮ್ಮ ನಾಲ್ಕು ಅನುಕಂಪದ ಆಶೀರ್ವಾದದ ನುಡಿ ನುಡಿಯೋಣ." ಎಂದು ಆ ಧನಪಾಲನನ್ನು ತೆಪ್ಪಗೆ ಮಾಡಿದರು.

ಈ ಮಾತು ಮುಗಿಯುತ್ತಿದ್ದಂತೆ ನಾನು ಎದ್ದು ಊರಿನವರಿಗೆ ಹತ್ತು ನಿಮಿಷ ಕಾಯಬೇಕೆಂದೂ, ಅಷ್ಟರಲ್ಲಿ ನಾನು ನಾಲ್ಕು ಕಾಳು ನೀರು ಮೈ ಮೇಲೆ ಹಾಕಿಕೊಂಡು ಬಂದು, ದೇವತಾರ್ಚನ ಮಾಡಿ ಪ್ರಸಾದ ವಿನಿಮಯ ಮಾಡುವದಾಗಿ ಹೇಳಿದೆನು. ಆಗಲೇ ಸಿಡಿದೆದ್ದು ಪುನಃ ಧನಪಾಲನು, "ಊರಿನವರು ಕೇಳುವ ಪ್ರಶ್ನೆಯ ಇತ್ಯರ್ಥವಾದ ಬಳಿಕವೇ ಇವನು ದೇವತಾ ಕಾರ್ಯಕ್ಕೆ ಕೈ ಹಚ್ಚಲಿ. ಮೊದಲು ಕೇಳುವದನ್ನು ಹಿರಿಯರು ಕೇಳಿ, ನಿರ್ಣಯ ಕೊಡಲಿ'' ಎಂದನು.

ಆಗಲೇ ಊರ ಹಿರಿಯರು ಮೇಲೆ ಹೇಳಿದಂತೆ ನನಗೆ ಇದು ಅಥವಾ ಇದು ಎಂಬ ಪ್ರಶ್ನೆ ಇತ್ತರು.

ನನ್ನ ಬಾಣವನ್ನು ಬಿಟ್ಟೆನು : "ನಾನು ಎಂದಿಗೂ ಅರ್ಚಕ. ನಡುವೆ ಎದ್ದ ಸುಂಟರ ಗಾಳಿಯನ್ನು ಹರದ್ವಾರದ ಹಿರಿಯರು ಗಡಿಪಾರು ಮಾಡಿದ್ದಾರೆ

ನಾನು ಒಕ್ಕಲಿಗನಾಗಲೊಲ್ಲೆ. ದೇವರ ಸೇವೆಯಲ್ಲಿಯೇ ನಿಲ್ಲುವೆನು,'' ಎಂದೆನು.

ಧನಪಾಲನು ಎದ್ದು ತನ್ನ ಅಸಹ್ಯ ಅಸುರೀವೃತ್ತಿಯ ಬಾಣವನ್ನು ಬಿಟ್ಟು ದ್ವಂದ್ವಕ್ಕೆ ಪುನಃ ಆಹ್ವಾನವಿತ್ತನು.

## (೧೭)

ಧನಪಾಲನು ತನ್ನ ಬಾಣವನ್ನು ನೇರವಾಗಿ ನನ್ನ ಎದೆಯ ಗುಂಡಿಗೆ ಗುರಿಯಟ್ಟಿದ್ದನು:

"ಈ ಪೂಜಾರಿ ನಮ್ಮ ಹಳ್ಳಿಯಲ್ಲಿ ಇರುವದಾದರೆ ಒಂದು ಮಾತಿಗೆ ಒಪ್ಪಿ ಇರಬೇಕು. ತನ್ನಲ್ಲಿದ್ದ ಹಣವನ್ನೆಲ್ಲ ಹಳ್ಳಿಯ ಸಾಮೂಹಿಕ ಹಣಕ್ಕೆ ಒಪ್ಪಿಸಿ ಕೈತೊಳೆದುಕೊಳ್ಳಬೇಕು. ಇನ್ನು ಮುಂದೆ ಅವನು ಇಲ್ಲಿ ಇರುವದು ಹೊಸ ಮನುಷ್ಯನಾಗಿ. ಕೇವಲ, ದೇವರಿಗೆ ಇನ್ನು ಮುಂದೆ ಒಪ್ಪಿಸುವ, ಎಡೆ ಅನ್ನವನ್ನೇ ತಿಂದು ಇವನು ಬದುಕಿರಬೇಕು. ಯಾವ ಸಮಯದಲ್ಲಿ ಯಾರಿಗೆ ತಿರುಗಿ ಬಿದ್ದಾನು ಎನ್ನುವ ಭರವಸೆ ಯಾರೂ ಹೇಳುವಂತಿಲ್ಲ. ಇವನು ಇವನ ತಲೆಮಾರಿನವರು ನಮ್ಮ ಊರಿನವರಲ್ಲ. ಉದಯಮಾನದವರಲ್ಲ. ಇದನ್ನು ಹಿರಿಯರು ನಿರ್ಧರಿಸಿಕೊಂಡು ಅವನಿಗೆ ಮುಂದೆ ಹೆಜ್ಜೆ ಇಡಲು ಅಪ್ಪಣೆ ಕೊಡಬೇಕು."

ಧನಪಾಲನ ಮಾತಿಗೆ ಎದ್ದು ಎದುರು ಹೇಳುವವರು ಯಾರೂ ಉಳಿಯಲಿಲ್ಲವೆನ್ನುವಷ್ಟರಲ್ಲಿ, ಒಬ್ಬನೇ ಒಬ್ಬ ಹಿರಿಯ—ಆತನೇ ಈ ಹಿಂದೆ ಧನಪಾಲನಿಗೆ 'ಮೂರ್ಖ' ಎಂದು ತೆಪ್ಪಗೆ ಮಾಡಿದ್ದ—ಪುನಃ ತನ್ನ ಮೆಲ್ಲಗಿನ ಧ್ವನಿಯಲ್ಲಿ ಸಾವಕಾಶವಾಗಿ ಹೇಳಿದನು: ''ಧನಪಾಲ, ನೀನು ಕಂಡೂ ಕಂಡು ವಿಷಯವನ್ನು ಒರೆಗೆ ಹಚ್ಚಲು ಯತ್ನಿಸುತ್ತೀಯಾ? ಪೂಜಾರಿ

ನೊನ್ನೆ ಮೊನ್ನೆಯೇ ತನ್ನ ತಂಗಿಯ ಮದುವೆ ಮಾಡಿ ಕೈಬರಿದು ಮಾಡಿ ಕೊಂಡು ಬಂದಿದ್ದಾನೆ. ಅವನು ನಮ್ಮ ಪಂಚಾಯತದ ಸಂಗ್ರಹಕ್ಕೆ ಇನ್ನೆಲ್ಲಿಂದ ಹಣ ತಂದು ಒಪ್ಪಿಸಬೇಕು? ಅವನು ಒಕ್ಕಲಿಗನಾಗಲು ತನ್ನ ಇಚ್ಛೆಯಿಲ್ಲವೆಂದು ಸಾರಿ ಹೇಳಿದ್ದಾನೆ. ಸಾಕು ಈ ಸತ್ವ ಪರೀಕ್ಷೆ''

ಈ ಮಾತಿಗೆ ಕುಳಿತವರು ''ಸರಿ ಸರಿ'' ಎಂದು ತಲೆದೂಗಿದರು. ಆದರೆ ಧನಪಾಲ ತನ್ನ ಹಟ ನಿಲ್ಲಿಸಲಿಲ್ಲ: ''ನೀವು ಹೇಳಿದಂತೆ ಈ ಪೂಜಾರಿ ಹತ್ತರ ಹಣವಿಲ್ಲವಷ್ಟೆ. ಹಾಗಿದ್ದರೆ ನನಗೆ ಇವನ ಮನೆಯಲ್ಲಿ ಹುಡುಕಿ ನೋಡಲು ಅವಕಾಶ ಕೊಡಿರಿ. ಅಲ್ಲಿಗೆ ನಾನು ನಿಮ್ಮ ಮಾತಿಗೆ ಶರಣಾಗತ ನಾಗುವೆನು.''

ಎಲ್ಲರೂ ನನ್ನ ಮುಖ ನೋಡಿದರು. ನಮ್ಮ ಮಿತ್ರ "ನಡುಗಾಲ ಪೂಜಾರಿ" ನನ್ನ ಸಹಾಯಕ್ಕೆ-ಯಾವ ಸ್ವಾರ್ಥತ್ಯಾಗಕ್ಕೂ ಸಿದ್ಧನಾಗಿರುವ ಮುಖಭಾವದಿಂಥ-"ಹುರಿಕಾಸು''ತ್ತಿದ್ದನು.

ನಾನು ಮಾತ್ರ ಸಂಪೂರ್ಣ ಸ್ತಿಮಿತಭಾವದಿಂದ ಉತ್ತರ ಕೊಟ್ಟೆನು:

''ನಾನಿರುವ ಮನೆ ಊರಿನವರ ಮನೆ. ನಾನು ಮಾಡುವ ಸೇವೆ ಊರವರ ಸೇವೆ. ಊರಿನವರು ತಮ್ಮ ಮನೆ ಶೋಧ ಮಾಡಬಯಸಿದರೆ ನಾನೇಕೆ ತಡೆಯಬೇಕು? ಊರವರು ನನ್ನ ಒಪ್ಪಿಗೆಯನ್ನೇಕೆ ಈ ವಿಷಯದಲ್ಲಿ ಕೇಳಬೇಕು. ಮನೆಯೊಂದನ್ನೇ ಏಕೆ, ನನ್ನನ್ನೂ ಶೋಧಿಸಿಕೊಳ್ಳಿರಿ'' ಎನ್ನುತ್ತ ನನ್ನ ಮೈಮೇಲೆ ಇದ್ದ ಒಂದೇ ಒಂದು ಉತ್ತರೀಯವನ್ನು ತೆಗೆದು ಒಗೆದು, ಸುತ್ತಿಕೊಂಡ ಲುಂಗಿಯನ್ನೂ ಬಿಚ್ಚಲು ಪ್ರಾರಂಭಿಸಿದೆನು-ಕೇವಲ ಕಪನಿಯ ಮೇಲೆ ಈ ಕಪಂಗಿಗಳ ಎದುರು ನಿಲ್ಲಲು....!

ಪುನಃ ಅದೇ ಹಿರಿಯ ಬಾಯಿ ಹಾಕಿದನು: "ಅಪ್ಪ! ಪೂಜಾರಿ! ನಮ್ಮನ್ನೇಕೆ ಹೀಗೆ ಮುಖ ಕೆಳಗಿಡುವಂತೆ ಮಾಡುವೆ? ನಿಲ್ಲಿಸು ನಿನ್ನ ವಸ್ತ್ರಾಪಹರಣದ ನಾಟಕವನ್ನು. ಧನಪಾಲನಿಗೆ ಬೇಕಾದರೆ, ಮನೆಯಲ್ಲಿ ನೋಡಿಕೊಳ್ಳಲಿ. ನಮಗೆ—ಊರಿನವರಿಗೆ ನಿನ್ನ ವಿಷಯದಲ್ಲಿ ಯಾವ

ಪರೀಕ್ಷೆಯನ್ನೂ ಮಾಡುವ ಇಚ್ಛೆ ಇಲ್ಲ." ಎಂದು ಆ ಹಿರಿಯ ನಾವಿಬ್ಬರು ಪೂಜಾರಿಗಳಿಗೆ ನಮಸ್ಕರಿಸಿ, ದೇವರಿಗೆ ಸಾಷ್ಟಾಂಗ ನಮಸ್ಕಾರಗಳನ್ನು ಒಪ್ಪಿಸಿ ಮನೆಯ ಕಡೆಗೆ ಹೊರಟನು. ಮೆಲ್ಲನೆ ಒಬ್ಬರ ಹಿಂದೆ ಒಬ್ಬರು ಆ ಹಿರಿಯ ನನನ್ನು ಹಿಂಬಾಲಿಸಿ ಹೊರಟು ಹೋದರು ಕೇವಲ ನಾನು ನನ್ನ ಸಹ ಪಾಠಿ ಅತ್ತ ಧನಪಾಲ ಅವನ ಜೊತೆಗೆ ಇಬ್ಬರು ಅವನ ಸಹಪಾಠಿಗಳು. ಹೀಗೆ ದೇವಮಂದಿರದಲ್ಲಿ ಐವರು ಉಳಿದೆವು. ನಾನು ಧನಪಾಲನಿಗೆ ಕೊನೆಯ ಮಾತು ಹೇಳಿದೆನು : "ನಿಮಗೆ ನನ್ನ ಮನೆ ನೋಡುವದಿದ್ದರೆ ಈ ಕ್ಷಣ ನೋಡಿ ಮುಗಿಸಿಕೊಳ್ಳಿರಿ. ಸುಮ್ಮನೆ ಹೆಜ್ಜೆ ಹೆಜ್ಜೆಗೆ ಪರಸ್ಪರ 'ಕೀಟಿ–ಪಾಟಿ' ಗಳು ನನಗೆ ಬೇಡ."

ಆಗ ಧನಪಾಲ ಎದ್ದವನೇ ನನ್ನ ಮನೆಯ ಕಡೆಗೆ ಹೊರಟನು. ಉಳಿದಿಬ್ಬರು ಕ್ಷಣ ಹೊತ್ತು ವಿಚಾರಿಸಿ, ಊರ ಕಡೆಗೆ ಹೊರಟರು. ಹಿಂದೆ ಮುಂದೆ ನೋಡದೆ ಆಗಲೇ ಧನಪಾಲ ನನ್ನ ಮನೆಯೊಳಗೆ ನುಗ್ಗಿದ್ದನು. ನನ್ನ ಸಹಪಾಠಿ ಅವನ ಹಿಂದೆಯೇ ಓಡಿದನು. ನಾನು ನಿಂತಲ್ಲಿಂದ ಕದಲಲಿಲ್ಲ. ಎಂದೂ ಯಾವ ಮನುಷ್ಯನೂ–ನನ್ನ ಮಟ್ಟದ ಮನುಷ್ಯ–ಈ ಸಹನೆಯನ್ನು ಪಡೆಯಲಾರನು. ಹತ್ತು ನಿಮಿಷಗಳಲ್ಲಿ ಮುಖ ಕೆಂಪಗೆ ಮಾಡಿಕೊಂಡು ಧನಪಾಲ ಹೊರಗೆ ಬಂದನು. ಬಹುಶಃ ಅವನಿಗೆ ನನ್ನ ಸಹಪಾಠಿ ನೇರವಾದ ಬಿಗಿತದ "ಕಪಾಲಮೋಕ್ಷ"ವನ್ನು ದಯಪಾಲಿಸಿರಬೇಕು. ನನ್ನ ಕಡೆಗೆ ನೋಡಿ ಕರಕರನೆ ಹಲ್ಲು ಕಡಿಯುತ್ತ ಭರಭರನೆ ಹಳ್ಳಿಯ ಹಾದಿ ಹಿಡಿದನು. ನಡುಗಾಲ ಪೂಜಾರಿ ಬಂದು ನನ್ನ ಹೇಡಿತನಕ್ಕೆ ನಾಲ್ಕು ಬಿರುಸು ಮಾತು ಆಡಿದನು. ತಾಳ್ಮೆಯೆಂದರೆ ಸ್ವಾಭಿಮಾನ ಶೂನ್ಯತೆಯಲ್ಲ ಎಂದನು. ಏನಂದರೂ ನಾನು ಕಲ್ಲಿನಂತೆ ನಿಂತಿದ್ದೆನು. ಒಂದು ಗಂಟೆ ಸುಮ್ಮನೆ ಎದುರಿಗೆ ಶೂನ್ಯದಲ್ಲಿ ಕಣ್ಣಿಟ್ಟು ನಿಂತಿದ್ದೆನು. ಕೊನೆಗೆ, ನನ್ನ ಮಿತ್ರ ನನ್ನು ಕರೆದುಕೊಂಡು ಸ್ನಾನಕ್ಕೆ ಹೋದೆನು. ನಾನು ಎಷ್ಟು ಹೊತ್ತು ನನ್ನ ಮೈಗೆ ನೀರು ಉಣಿಸಿದೆನೆಂಬುದೇ ನನಗೆ ಅರಿವಿಲ್ಲ. ತಾಂತ್ರಿಕವಾಗಿ ನನ್ನ ಮಿತ್ರ ಕರೆತಂದು ನನ್ನನ್ನು ಮನೆಗೆ ಮುಟ್ಟಿಸಿ, ದೇವತಾರ್ಚನೆಮಾಡಿಸಿ, ಉಣಬಡಿಸಿದ ಅನಂತರ ನಾನು ಪೂರ್ಣ ನಿದ್ದೆಯಲ್ಲಿ ನನ್ನನ್ನೇ ಮರೆತುಬಿಟ್ಟೆನು.

ನನ್ನನ್ನು ನನ್ನ ಸಹಪಾಠಿ ಒತ್ತಾಯದಿಂದ ಎಬ್ಬಿಸಿದನು. ಆಗ ನಮ್ಮ ಮನೆಯ ಹೊರಗೆ ಗುಡಿಯ ಅಂಗಳದಲ್ಲಿ ಜನರ ಕೂಗಾಟ ಕೇಳಬಂದಿತು. ಹೊರಗೆ ಬಂದಾಗ, ಇಬ್ಬಣವಾಗಿ ಊರಿನವರು ಕೂಗಾಡುತ್ತಿದ್ದರು. ಒಂದು ಬಣದ ಕೈಗಳಲ್ಲಿ ಉರಿವ ಪಂಜುಗಳು. ಇನ್ನೊಂದು ಬಣದಲ್ಲಿ "ಕಂಕುಳಲ್ಲಿ ದೊಣ್ಣೆ ಕೈಯಲ್ಲಿ ಶರಣಾರ್ತಿ." ಒಂದು ಬಣದವರು ನಮ್ಮನ್ನು ಸಜೀವವಾಗಿ ನಮ್ಮ ಮನೆಯಲ್ಲಿ ಸುಡಲು ಹಾತೊರೆದು ಬಂದಿದ್ದರು ಇನ್ನೊಬ್ಬರ ಮೊದಲಿನವರಿಗೆ ಕೈಕಾಲು ಬಿದ್ದು ಶರಣಾರ್ತಿ ಎಂದು ಮನವೊಲಿಸಲೆತ್ನಿಸಿ ಬಿಡಿಸಬಂದವರು—ಬಿಡದಿದ್ದರೆ, ದೊಣ್ಣೆಯ ಕಾಯಕದಿಂದ ಅವರನ್ನು ಹಿಂದೆ ಅಟ್ಟಲು ಬಂದವರು. ಶರಣಾರ್ತಿಯ ಮೇಳದವರು ಸಕಾಲದಲ್ಲಿ ಬರದಿದ್ದರೆ ನಾವು ಇಬ್ಬರೂ ಸಜೀವ ಅಗ್ನಿ ನಾರಾಯಣನ ಪಾಲಾಗುತ್ತಿದ್ದೆವೆಂದು ನಮಗೆ ತಿಳಿದುಬಂದಿತು. ಆಗ ನಾವು ಎರಡನೆಯ ಮೇಳದಲ್ಲಿ ನಿಂತಿದ್ದ ನಮ್ಮ ಪಕ್ಷದ ಹಿರಿಯರನ್ನು ಕಂಡು ನಮ್ಮ ಕೃತಜ್ಞತೆಯನ್ನು ಒಪ್ಪಿಸಿದೆವು. ಮತ್ತು ಮೊದಲಿನ ಮೇಳದಲ್ಲಿದ್ದ ಧನಪಾಲನ ಕೈಯೊಳಗಿನ ಪಂಜನ್ನು ಕಸಿದುಕೊಂಡು ನನ್ನ ಮನೆಯ ಕಡೆಗೆ ನನ್ನ ಮಿತ್ರ ಪೂಜಾರಿಯನ್ನು ದೂಡಿಕೊಂಡು ನಡೆದೆನು. ಅವನನ್ನು ಒಳಗೆ ಹಾಕಿದೆನು. ಮೂಕ ಸನ್ನೆಯಿಂದ ನಾನೂ ಬೆಂಕಿ ಹಚ್ಚಿ ಒಳಗೆ ಬರುವದಾಗಿ ಎದೆತಟ್ಟಿ ಹೇಳಿದೆನು. ಪಿಟ್ಟೆನ್ನದೆ ಅರ್ಚಕ ಮಿತ್ರ ಒಳಗೆ ಹೋದನು. ನಾನು 'ನನ್ನ' ಮನೆಯ ಚಪ್ಪರಕ್ಕೆ ಪಂಜನ್ನು ಹಿಡಿದು ನಿಂತೆನು "ಓ ! ಓ !" ಎರಡೂ ಬಣಗಳ ಜನರು ನನ್ನ ಕಡೆಗೆ ನುಗ್ಗಿದರು. ನನ್ನ ಕೈಯಲ್ಲಿದ್ದ ಪಂಜು ಕಸಿದು ಎಸೆದರು. ಆಗಲೇ ಸ್ವಲ್ಪ ಉರಿಯುತ್ತಿದ್ದ ಬೆಂಕಿಯನ್ನು ನೀರು ತಂದು ಆರಿಸಿದರು. ಪಂಜು ದೊಣ್ಣೆ ಎಲ್ಲವೂ "ಪಂಜುಗಳ್ಳ ! ಧನಪಾಲ ! ಎಲ್ಲಿ ಅವನು ! ಎಲ್ಲಿ ಅವನು !" ಎಂದು ಹುಡುಕಹತ್ತಿದರು ಅವನ ಬಾಣಗಳು ಅವನಿಗೇ ತಿರುಗಿದವು. ನಾನು ಓಡಿ ಹೋಗಿ ಎಲ್ಲರನ್ನೂ ತಡೆದು ನಿಲ್ಲಿಸಿದೆನು. ನನ್ನ ಎದೆಯ ಮೇಲೆ ಸಾಗರದಂತೆ ಜನ ಸಮುದಾಯ ಏರಿ ಬಂದಿತು. ಅಡ್ಡಗಟ್ಟಿ ನಿಂತ ನನ್ನ ತೋಳುಗಳಿಗೆ ಮತ್ತು ಎದೆಗೆ ಅಪ್ಪಳಿಸುತ್ತಿದ್ದ ಸಾಗರದ ಅಲೆಗಳು ಶಾಂತವಾದವು. ಆದರೆ ಧನಪಾಲ ಮಾತ್ರ ಕಾಲಿಗೆ ಬುದ್ಧಿ ಹೇಳಿ ಊರು ಬಿಟ್ಟು ಹೊರಟು ಹೋಗಿದ್ದ ವಾರ್ತೆ ಕೇಳಿ ನನಗೆ ಅತಿ ದುಃಖವಾಯಿತು. ದುಃಖ ಅವನ ದೆಸೆಯಿಂದ ಅಲ್ಲ. ಇನ್ನು ಮುಂದೆ ನಾನು ಹೇಳುವ ವಿಷಯಗಳಿಗಾಗಿ..

# [೧೮]

" ಮಾನ್ಯರೆ, ಇನ್ನು ನಾನು ತಮ್ಮ ಸಮಯವನ್ನು ಹೆಚ್ಚು ತೆಗೆದುಕೊಳ್ಳುವದಿಲ್ಲ. ನೇರವಾಗಿ ಸ್ವಲ್ಪ ಸಮಯದಲ್ಲಿ ಸಂಬಂಧಿಸಿದ ವಿಷಯಕ್ಕೆ ಬಂದು ಬಿಡುವೆನು ತಮ್ಮ ಆಧೀನದಲ್ಲಿರುವ ಬಾಲಿಕೆ ಎಲ್ಲಿಯೂ ಸಂಬಂಧಿಕರಿಲ್ಲದ ಅನಾಥೆಯಲ್ಲ. ನಾನು ಬೆನ್ನಟ್ಟಿ ಅವಳನ್ನು ಅಪಹರಿಸಿಕೊಂಡೊಯ್ಯಲು ಬಂದಿಲ್ಲ. ಅವಳು ಧನಪಾಲನ ಏಕಮಾತ್ರ ಸಹೋದರಿ. ಅವಳ ಹೆಸರು ಸುಂದರಾ. ಅವಳು ಊರು ಬಿಟ್ಟಾಗ ಚಿಕ್ಕವಳು. ಈಗ ಬಹಳ ಬೆಳೆದು ಬಂದಿದ್ದಾಳೆ. ಅವಳು ಊರು ಬಿಟ್ಟು ಬರಲು ಅಂದು ಊರಲ್ಲಿ ನಡೆದ ಘರ್ಷಣೆಯೇ ಕಾರಣ. ಧನಪಾಲನ ಮನೆತನ ಊರಿನಲ್ಲಿರುವ ನಾಲ್ಕಾರು ಧನಿಕ ಮನೆತನಗಳಲ್ಲಿ ಒಂದು. ಧನಪಾಲನ ತಂದೆತಾಯಿಗಳು ಅವನು ವಯಸ್ಕನಾದ ಮೇಲೆಯೇ ತೀರಿಕೊಂಡರು. ಧನಪಾಲನು ನನ್ನ ವಯಸ್ಸಿನವನಲ್ಲ ನನಗಿಂತಲೂ ಹಿರಿಯನು. ತಂದೆತಾಯಿ ತೀರಿಕೊಂಡ ಕೆಲದಿನಗಳಲ್ಲಿ ಧನಪಾಲನಿಗೆ ಧನದ ಪಿತ್ತ ನೆತ್ತಿಗೇರಿತು. ಕೆಲದಿನಗಳಲ್ಲಿ ಅವನಿಗೆ ನೆರೆಯ ಊರಿನ ಧನಿಕನ ಮಗಳೊಡನೆ ಮದುವೆಯಾಯಿತು. ಮರುವರ್ಷದಲ್ಲಿ ಅವನಿಗೆ ಊರಿನ ಗ್ರಾಮಪಂಚಾಯತದ ಅಧ್ಯಕ್ಷ ಸ್ಥಾನ. ಹೀಗೆ ಒಂದರ ಮೇಲೆ ಒಂದು ತ್ರಿಗುಣಗಳು ಕೂಡಿಕೊಂಡು ನಾಲ್ಕನೆಯ ಅವಗುಣ ಅವುಗಳನ್ನು ಏರಿ ಕುಳಿತಿತು. ಅವಿವೇಕ.

ಯೌವನಂ ಧನಸಂಪತ್ತಿಃ ಪ್ರಭುತ್ವಮವಿವೇಕಿತಾ !
ಏಕೈಕಮಪ್ಯನರ್ಥಾಯ ಕಿಮು ಯತ್ರ ಚತುಷ್ಟಯಂ ||

ಮದೋನ್ಮತ್ತ ನರಪಶುವಿನಂತೆ ಸುತ್ತುಮುತ್ತಿನವರ ಮೇಲೆ ಹರಿಹಾಯಲಿಕ್ಕೆ ಹತ್ತಿದನು. ಶೋಷಣೆಯಿಂದ ತನ್ನ ಸಂಪತ್ತು ಬೆಳೆಸುವ ರಾಕ್ಷಸೀ ಮಹತ್ವಾಕಾಂಕ್ಷೆ ಅವನಲ್ಲಿ ಬೆಳೆದು ಕೊನೆಗೆ ನನ್ನ ಪ್ರಕರಣದಲ್ಲಿ ಊರು ಬಿಟ್ಟು ದಿಕ್ಕಾಪಾಲಾಗುವ ಪ್ರಸಂಗ ತಂದುಕೊಂಡಿತು. ಅಂದು ಅವನು

ಊರು ಬಿಟ್ಟು ಹೋಗುವಾಗ ಅವನ ಸಾಧ್ವೀ ಹೆಂಡತಿ ತವರೂರಿನಲ್ಲಿದ್ದಳು. ಮನೆಯಲ್ಲಿ ಇವನ ಸಹೋದರಿಯೊಬ್ಬಳೇ ಆಳುಮಕ್ಕಳೊಡನೆ ಹೊಲಮನೆಯ ಕಾರ್ಯಗಳನ್ನೆಲ್ಲ ಪೂರಯಿಸುತ್ತಿದ್ದಳು. ಇವನು ಮುಂಜಾನೆ ಎದ್ದು ಕಣ್ಣು ಒರಸಿಕೊಂಡಂದಿನಿಂದ ರಾತ್ರಿ ತೂಕಡಿಕೆ ಬಂದು ಹಾಸಿಗೆಗೆ ಬೀಳುವ ತನಕ ಕುಹಕ ವಿಚಾರಗಳ ಲೆಕ್ಕಾಚಾರದಲ್ಲಿ ಕಾಲಕಳೆಯುತ್ತಿದ್ದನು. ಮನೆಯಲ್ಲಿ ಇವನ ಪತ್ನಿ ಇದ್ದಾಗ ಊರಿನಲ್ಲಿ ನೆಮ್ಮದಿ. ಅವಳು ತಾಯ್ತನಕ್ಕಾಗಿ ಹೋದಾಗ ನಡೆದ ಈ ಘಟನೆಯಿಂದ ಮನೆಯ ಸಂಪತ್ತು ಸೂರೆಯಾಗಬಹುದಿತ್ತು. ಆದರೆ ಅವನ ಸೋದರಿಯ ಕಣ್ಮರೆಯಿಂದ ಊರಿಗೆ ಊರೇ ಚಿಂತೆಯಿಂದ ತುಟಿ ಮಿಸುಕದೆ ಬೆರಳಾಡಿಸದೇ ನಿಂತು ಬಿಟ್ಟಿತು. ಧನಪಾಲನ ಬೀಗರು ಬಂದು ಮನೆಯ ಹೊಣೆಯನ್ನು ನಿರ್ವಹಿಸಿಕೊಂಡರು. ಧನಪಾಲನ ನೆಲೆ-ಕಲೆಗಳ ಸುಳಿವು ಒಂದು ತಿಂಗಳು ಯಾರಿಗೂ ಸಿಗಲಿಲ್ಲ. ಇಡೀ ಊರು ಬೀಗರ ಊರಿನ ಹಿರಿಯರನ್ನು ಕರೆಯಿಸಿಕೊಂಡು ಕೊಟ್ಟ ವಚನ, ಇತ್ತ ಭರವಸೆಗಳ ವಿಷಯ ಸುತ್ತುಮುತ್ತಿನ ಊರುಗಳಲ್ಲಿಯ ಜನ ಜನಿತವಾದ ಮೇಲೆಯೇ ಧನಪಾಲನು ತನ್ನ ಪತ್ನಿಯ ಊರಿಗೆ ಹೋಗಿ ನೆಲೆಗೊಂಡಿದ್ದಾನೆ. ಆದರೆ ಅವನಿನ್ನೂ ತನ್ನ ಅಸ್ತ್ರಗಳನ್ನು ಕೆಳಗಿರಿಸಿಲ್ಲ ಅವನು ಹೂಡಿರುವ ಬಾಣಗಳ— ಶರಪಂಜರದ— ಮೇಲೆಯೇ ನನ್ನ ಸಮಾಧಿಯಾಗಬೇಕೆಂದೂ ಅವನು ಬಯಸಿದಂತಿದೆ. ಭೀಷ್ಮಾಚಾರ್ಯರಂತೆ ನಾನು ಇಚ್ಛಾಮರಣಿಯಾಗಿದ್ದರೆ ನಾನು ಈ ಶರಪಂಜರದ ಮೇಲೆ ಸ್ಥಾಪಿಸಿಕೊಂಡು ಅಸು ಬಿಡಬಹುದಿತ್ತು. ಆದರೆ ನಾನೊಬ್ಬ ಸಾಮಾನ್ಯ ಅರ್ಚಕ- ಸ್ವಾಭಿಮಾನಿ ಮತ್ತು ನಿರಪರಾಧಿ. ನನ್ನ ನಿರಪರಾಧಿತ್ವವನ್ನು ನಾನು ಸಿದ್ಧಪಡಿಸಿಕೊಂಡು ನನ್ನ ಸ್ವಾಭಿಮಾನವನ್ನು ಕಾಯ್ದುಕೊಳ್ಳಬೇಕಾಗಿದೆ ಅವನ ಹಿಡಿತ ಹೊಡೆತಕ್ಕೆ ಮದ್ದಾನೆಯಾದರೂ ಹತ್ತಿಯ ಅಂಡಿಗೆಯಂತೆ ಉರುಳಿ ನೆಲಕ್ಕೆ ಬೀಳಬಹುದು. ನಾನು ಬೀಳದಿರಲು ಅವನ ಧರ್ಮಪತ್ನಿಯೇ ಕಾರಣಳು. ನಾನು ಅವಳಿಗಾಗಿ ಚಿರಋಣಿ. ಅವಳು ನನಗೆ ಸಕಾಲದಲ್ಲಿ ಅವಶ್ಯ ಸೂಚನೆಗಳನ್ನು ಕೊಟ್ಟು ನಾನೂ ಊರು ಬಿಡುವಂತೆ ಮತ್ತು ಕಾರ್ಯೋನ್ಮುಖನಾಗುವಂತೆ ಮಾಡಿದಳು. ಅವಳಿತ್ತ ಸೂಚನೆಗಳ ಅನ್ವಯ ನಾನು ಇಂದು

ಆ ನಾಡಿನಿಂದ ಈ ನಾಡಿಗೆ ಧನಪಾಲನ ಸಹೋದರಿಯನ್ನು ಹುಡುಕುತ್ತ ಬಂದಿದ್ದೇನೆ.

ಧನಪಾಲನು ನನಗಾಗಿ ರಚಿಸಿದ ಶರಪಂಜರ ಇಂತಿದೆ— ನಾನೇ ಅವನ ಸಹೋದರಿಯನ್ನು ದಿಕ್ಕುಗಳ ಪಾಲು ಮಾಡಿದ್ದೇನೆ, ಇದರಲ್ಲಿ ನನ್ನ ಸಹಪಾಠಿ- ನಡುಗಾಲ ಪೂಜಾರಿಯ ಕೈವಾಡವಿದೆ. ಅವಳನ್ನು ಧನಪಾಲನಿಗೆ ತಂದೊಪ್ಪಿಸಬೇಕು, ಕ್ಷಮೆ ಬೇಡಿ ಊರು ಬಿಡಬೇಕು. ಇಲ್ಲವಾದರೆ ಇದ್ದ ಊರಿನ, ಧನಪಾಲನ ಬೀಗರ ಊರಿನ, ಜನತೆಯ ಸೇಡಿನ ಪ್ರತೀಕಾರಕ್ಕೆ ಸಿದ್ಧನಾಗಬೇಕು. ಈ ಬೇಡಿಕೆಯನ್ನು ನಮ್ಮ ಊರಿನವರೆದುರು ಮಂಡಿಸಿದವರು ಧನಪಾಲನಿಗೆ ಹೆಣ್ಣು ಕೊಟ್ಟ ಮಾವಂದಿರು. ಅತಿ ಬಲಿಷ್ಠ ಶ್ರೀಮಂತರು. ಇಷ್ಟು ದಿನ ತಮ್ಮ ನ್ಯಾಯ ನಿರ್ಣಯ ಮತ್ತು ನಿಷ್ಠುರ ವಾಕ್ಯಗಳಿಗೆ ಹೆಸರಾದವರು, ಎಂದೂ ಸುಳ್ಳಾಡದವರು. ಅಂತಹವರನ್ನು ಧನಪಾಲ ತನ್ನ ಕಣ್ಣೀರಿನ ಕಡಲಿನಲ್ಲಿ ತೇಲಿಸಿ ಬಿಟ್ಟಿದ್ದನು ಅವರ ನೌಕೆ ನಮ್ಮ ಊರಿನ ದಡಕ್ಕೆ ಹತ್ತಿ ಬಂದು ನಮ್ಮ ಊರಿನ ಎಲ್ಲರನ್ನೂ ಒಡೆಯಿಸಿಕೊಂಡಿತು. ಆದರೆ ಎಲ್ಲ ವಿಷಯಗಳನ್ನು ತನ್ನ ಗಂಡನ ಮನೆಯ ಆಳುಮಕ್ಕಳಿಂದ ತಿಳಿದುಕೊಂಡ ಧನಪಾಲನ ಧರ್ಮಪತ್ನಿ ಇದಾವುದಕ್ಕೂ ಅಡ್ಡಿ ಮಾಡದೆ, ನನಗೆ ಧರ್ಮಮಾರ್ಗವೊಂದನ್ನು ತಿಳುಹಿಸಿ, ಅದರಂತೆ ಆಚರಿಸುವಂತೆ ನನಗೆ ಆಗ್ರಹದ ಅರುಹನ್ನಿತ್ತು, ತನ್ನ ವಿಶ್ವಾಸದ ಒಬ್ಬರಿಂದ ನನಗೆ ಪೂರ್ವಸೂಚನೆ ಕೊಟ್ಟು ಕಳಿಸಿದ್ದರು. ನಾನು ಧನಪಾಲನ ಸೋದರಿಯನ್ನು ಹುಡುಕಿಕೊಂಡು ಅವಳನ್ನು ಎರಡೂ ಊರಿನ ಹಿರಿಯರ ವಶಕ್ಕೆ ಒಪ್ಪಿಸಬೇಕು. ಮತ್ತು ನಡೆದ ಸಂಗತಿಗಳನ್ನೆಲ್ಲ ಈ ಬಾಲಿಕೆ ಊರಿನವರ ಮನಸ್ಸಿಗೆ ಹಿಡಿಸುವಂತೆ ಹೇಳಿ ಒಪ್ಪಿಸಬೇಕು. ಆಗ ಮಾತ್ರ ನಾನು ಮುಕ್ತನು. ಅಲ್ಲಿಯ ತನಕ ನಾನು ಹೀಗೆಯೇ ಬಿರುಗಾಳಿಯ ಕುದುರೆಯನ್ನೇರಿ, ಅದು ಸೆಳೆದೊಯ್ದತ್ತ ಹೋಗಿ ಅದು ಇಳಿಸಿದತ್ತ ಇಳಿಯಬೇಕಾಗಿದೆ. ಅದು ಕುಪ್ಪಳಿಸಿ ನನ್ನನ್ನು ಯಾವುದೊಂದು ಕೊಳ್ಳಕ್ಕೂ ಒಯ್ದು ಎಸೆಯಬಹುದಿತ್ತು, ಆದರೆ ದೈವವಶಾತ್ ನಾನು ಈ ಪಂಚಕಲ್ಯಾಣಿಯ ಸಹವಾಸವನ್ನು ತಪ್ಪಿಸಿಕೊಂಡಿದ್ದೇನೆಂದು ನಂಬಿದ್ದೇನೆ. ಇನ್ನೂ ಪೂರ್ಣ ಖಚಿತವಾಗಿಲ್ಲ.

ಈ ಬಾಲಿಕೆಯು ಅಂದಿನ ಘರ್ಷಣೆ ಪಡೆದಾಗ ಊರಮುಂದಿನ ತನ್ನ ಹೊಲದಲ್ಲಿದ್ದಳು. ಊರೊಳಗಿನ ಘರ್ಷಣೆಯಿಂದ ತನ್ನ ಅಣ್ಣ ತಲೆ ಮರೆಯಿಸಿಕೊಂಡು ಓಡಿಹೋದನೆಂಬ ತಲ್ಲಣದ ಸುದ್ದಿಯನ್ನು ಕೇಳಿದ ಬಾಲಿಕೆ ತಾನೂ ಬೆದರಿ ಹೊಲವನ್ನು ಬಿಟ್ಟು, ತನ್ನ ಅಣ್ಣನ ಹೆಂಡತಿಯ ಊರಿಗೆ ಹೋಗಬೇಕೆಂಬ ಬಯಕೆಯಿಂದ, ಒಬ್ಬಳೇ ಅವರಿವರನ್ನು ಕೇಳುತ್ತ ಅರಿಯದ ಹಾದಿಯನ್ನು ಹಿಡಿದಳು. ಅವಳು ಈ ಪರಿಸ್ಥಿತಿಯಲ್ಲಿರುವಾಗ ಕೆಲವು ಮಹಾಜನಗಳ ಕೈಗೆ ಸಿಕ್ಕಳು. ಅವಳನ್ನು ಅಪಹರಿಸಿ ಅವರು ಇನ್ನು ಬೇರೆಡೆ ಸಾಗಿಸುವವರಿದ್ದರು. ನಾನು ಇವರಲ್ಲಿಯೇ ಒಬ್ಬನಾಗಿ ಇವರ ಸುತ್ತು ಮುತ್ತು ಭ್ರಾಮಕ ಪ್ರತಿಸ್ಪರ್ಧಿಗಳನ್ನು ನಿರ್ಮಿಸಿ, ಇವಳನ್ನು ಈ ಊರಿಗೆ ತಂದೆನು. ಆಗ ನಾನು ಅವಳು ತೀರ ನಿಕೃಷ್ಟಾವಸ್ಥೆಯಲ್ಲಿದ್ದಾಗ ಅವಳನ್ನು ನಮ್ಮೂರಿಗೆ ಒಯ್ಯಬೇಕೆಂದಿದ್ದೆನು. ಆದರೆ ಧೈರ್ಯಸಾಲಲಿಲ್ಲ. ಅವಳ ಮನೋಭೂಮಿಕೆ ನನಗೆ ತಿಳಿದಿರಲಿಲ್ಲ. ಅಷ್ಟರಲ್ಲಿ ತಮ್ಮ ಅಧಿಕಾರಿಗಳು ಇವಳನ್ನು ಸ್ವಾಧೀನ ಪಡಿಸಿಕೊಂಡರು. ನನ್ನನ್ನು ಇನ್ನೂ ಆ ಮಹನೀಯರ ಗುಂಪಿನವನೆಂದೇ ತಿಳಿದಿರಬೇಕು. ಅಂತೆಯೇ ಅವಳು ನನ್ನನ್ನು ಕೆಂಗಣ್ಣುಗಳಿಂದ ನೋಡಿದ್ದಾಳೆ. ಅವಳನ್ನು ಈ ಸ್ವಸ್ಥಸ್ಥಾನಕ್ಕೆ ತಂದು ಮುಟ್ಟಿಸಬೇಕಾದರೆ ನನ್ನ "ವೈ-ಮನಂಗಳ ನೆಣದ ಕುರಿಕೋಣಗಳು ಎಷ್ಟು ಬಿದ್ದು ಹೋದವೆಂಬುದನ್ನು ಹೇಳುವದು" ಈ ಸಮಯದಲ್ಲಿ ಸಾಧ್ಯವಿಲ್ಲ. ಈ ಕುರಿಕೋಣಗಳ ಬಲಿದಾನದ ಸಮಯದಲ್ಲಿ ಈ ದೃಶ್ಯವನ್ನು ಕಣ್ಣಾರೆ ಕಂಡ ಈ ಬಾಲಿಕೆಯ ಮನಸ್ಸಿನ ಮೇಲೆ ಯಾವ ಆಘಾತಗಳಾಗಿವೆಯೆಂಬುದನ್ನು ನನಗಿಂತಲೂ ತಮ್ಮ ಅಧಿಕಾರಿಗಳು ತಮಗೆ ಹೆಚ್ಚು ಪರಿಣಾಮಕಾರಿಯಾಗಿ ಹೇಳಬಲ್ಲರು. ಇಲ್ಲಿಗೆ ನಾನು ಹೇಳುವದನ್ನು ಮುಗಿಸಲು ತಮ್ಮ ಸನ್ಮಾನ್ಯ ಅಪ್ಪಣೆಯನ್ನು ಕೋರುತ್ತೇನೆ."

***

# [೧೯]

ನ್ಯಾಯಾಲಯದಲ್ಲಿ ಎಲ್ಲರೂ ಒಂದು ದೀರ್ಘ ಶ್ವಾಸವನ್ನೆಳೆದುಬಿಟ್ಟರು. ಈ ನಿಟ್ಟುಸಿರಿನಲ್ಲಿ ಪರಿಹಾರ ದೊರೆತ ಒಂದು ಸಮಾಧಾನದ ಭಾವನೆಯು ವ್ಯಕ್ತವಾಗುತ್ತಿತ್ತು.

ನ್ಯಾಯದ ತಕ್ಕಡಿಯಲ್ಲಿ ಗುಂಜಿಯ ನೂರರಲ್ಲಿ ಒಂದು ಪಾಲೂ ಹೆಚ್ಚು ಕಡಿಮೆಯಾಗುವಂತಿಲ್ಲ. ಸಾಧು ಮಹಾಶಯನ ಹೇಳಿಕೆಯಿಂದ ಸಾಮಾನ್ಯ ದೈವದವರು ಆಗಿದ್ದರೆ, ಈ ಪ್ರಕರಣವನ್ನು ಅಲ್ಲಿಗೇ ಮುಗಿಸಿ ಅದರ ಇತ್ಯರ್ಥ ವನ್ನು ಹೇಳಿಬಿಡಬಹುದಿತ್ತು.

ಆದರೆ ನ್ಯಾಯಾಲಯದೆದುರು ಇದ್ದ ಕಾಗದ ಪತ್ರಗಳು ಎಲ್ಲ ದೃಷ್ಟಿ ದಿಶೆಗಳಿಂದಲೂ ತಾಳಮೇಳವಾಗಿರಬೇಕಷ್ಟೇ.

ಸಮಯ ಸಾಕಷ್ಟು ಆದದ್ದರಿಂದ ನ್ಯಾಯಾಧೀಶರು ಅಂದಿನ ಎಲ್ಲ ವಿಷಯಗಳನ್ನು ಒಂದು ವಾರ ಮುಂದಕ್ಕೆ ತಳ್ಳಿದರು. ಅಷ್ಟರಲ್ಲಿ ನಾವು ನಮ್ಮ ಕಾಗದ ಪತ್ರಗಳನ್ನು ಅವಶ್ಯವಿದ್ದಲ್ಲಿ ಪ್ರಮಾಣಿಸಿ, ನೋಡಿಕೊಳ್ಳಬೇ ಕೆಂದು ಸೂಚಿಸಿ, ಅಂದಿನ ಕಾರ್ಯವನ್ನು ಮುಕ್ತಾಯಗೊಳಿಸಿದರು.

ಅಧಿಕಾರಿಗಳಾದ ನಮ್ಮನ್ನು ಐದು ನಿಮಿಷಗಳ ಮಟ್ಟಿಗೆ ವಿಶ್ರಾಂತಿಯ ಕೊಠಡಿಯಲ್ಲಿ ಕರೆಯಿಸಿಕೊಂಡರು. ಸಾಧು ಮಹಾಶಯನ ವಿಷಯದಲ್ಲಿ ನ್ಯಾಯಾಲಯವು ಯಾವ ವಿಧದ ನಿಲುಮೆಯನ್ನು ತಳೆಯಬೇಕೆಂಬುದರ ವಿಷಯದಲ್ಲಿ ನನ್ನೊಡನೆ ಚರ್ಚೆ ಮಾಡಿದರು. ಅನಂತರ ನ್ಯಾಯಾಲಯ ದಲ್ಲಿ ಬಂದು, ಸಾಧು ಮಹಾಶಯನಿಗೆ ಒಂದು ವಾರದ ಮಟ್ಟಿಗೆ ನಮ್ಮೊಡನೆ ಸಹಕರಿಸಿ ನಮ್ಮ ನೇತೃತ್ವದಲ್ಲಿ ಇರುವಂತೆ ಆಜ್ಞಾಪೂರ್ವಕ ಸೂಚನೆಯನ್ನು ಮುಖತಃ ಹೇಳಿದರು.

ಸಾಧು ಮಹಾಶಯ ಸರ್ವರೀತಿಯಿಂದಲೂ ವಿಧೇಯನಾಗಿ ನಮ್ಮೊಡನೆ ಸಹಕರಿಸುವದಾಗಿ ಒಪ್ಪಿಕೊಂಡನು. ಆಗ ಅವನಿಗೆ ನ್ಯಾಯಾಲಯದಿಂದ ತೆರಳಿ ಹೊರಗಿದ್ದು ನಮ್ಮ ಮುಂದಿನ 'ಆಜ್ಞೆ' ನಿರೀಕ್ಷಣೆ ಮಾಡಲು ತಿಳಿಸಲಾಯಿತು. ಸಾಧು ಹೊರಗೆ ಹೋದ ಮೇಲೆ ಸುಂದರಾ ಮತ್ತು ಹರಪ್ರಸಾದರನ್ನು ಕರೆಯಿಸಿಕೊಂಡು, ನ್ಯಾಯಾಧೀಶರು ಆ ಮಕ್ಕಳನ್ನು ತಮ್ಮ ಬದಿಗೆ ನಿಲ್ಲಿಸಿಕೊಂಡು, ಅಕ್ಕರೆಯಿಂದ ಮೈದಡವಿ, ಮುಂದಿನಂತೆ ಅವರಿಗೆ ತಿಳಿಸಿದರು: " ನೀವಿಬ್ಬರೂ ಮುಂದಿನ ವಾರ ನಿಮ್ಮ ನಿಮ್ಮ ಊರಿಗೆ ಹೊರಡುವ ಸಿದ್ಧತೆ ಇಟ್ಟುಕೊಳ್ಳಿರಿ. ನಿಮ್ಮ ವಿಷಯವಾಗಿ ನಮಗೆ ಎಲ್ಲವೂ ತಿಳಿದು ಬಂದಿದೆ. ನೀವು ಬಹಳ ಕಷ್ಟಪಟ್ಟಿದ್ದೀರಿ. ಒಂದು ವಾರ ಇಲ್ಲಿರುವ ಎಲ್ಲ ಮಕ್ಕಳೊಡನೆ ನಕ್ಕು ಕೆಲೆದು ಸಂತೋಷದಿಂದ ಕಾಲಕಳೆಯಿರಿ. ನಿಮ್ಮ ಅಧಿಕಾರಿಗಳಿಗೆ ಈ ವಾರದಲ್ಲಿ ನಿಮ್ಮನ್ನೂ ಉಳಿದ ಮಕ್ಕಳನ್ನೂ ಸಮೀಪದ ಜಲಾಶಯಕ್ಕೆ ಕರೆದುಕೊಂಡು ಹೋಗಿ ವನಭೋಜನ ಮಾಡಿಸಲು ತಿಳಿಸಿದ್ದೇವೆ. ಯಾವ ರೀತಿಯಿಂದಲೂ ನೀವು ಮತ್ತೊಂದು ವಿಚಾರ ಮಾಡದೇ ನಲಿಯುತ್ತ ಹೊತ್ತು ಕಳೆಯಿರಿ. ಮುಂದಿನವಾರ ನಮಗೆ ಈ ವಾರ ನೀವು ಏನು ಏನು ಮಾಡಿದಿರೆಂಬುದನ್ನು ತಿಳಿಸಬೇಕು. ಮರೆಯಬಾರದು ತಿಳಿಯಿತೆ ? "

ಮಕ್ಕಳು ಮುಖವನ್ನರಳಿಸಿ, ನ್ಯಾಯಾಧೀಶರಿಗೆ ಕೃತಜ್ಞತೆಯಿಂದ ನಮಸ್ಕರಿಸಿದರು.

ನ್ಯಾಯಾಧೀಶರು ತಮ್ಮ ನಿವಾಸಕ್ಕೆ ತೆರಳಿದಾಗ ರಾತ್ರಿ ೧೦ ಗಂಟೆ ಆಗಿತ್ತು. ನಮಗೆ ನಮ್ಮ ಕಕ್ಷೆಯಾಚೆಗೆ ಹೋಗಿ, ಈ ಸಾಧು ಮಹಾಶಯನ ಕಾವಲು ಮಾಡುವ ಒಂದು ಪ್ರಸಂಗವು ನಮ್ಮ ಬೆನ್ನಿಗೆ ಬಿದ್ದಿತು.

ವಸತಿಗೃಹದಲ್ಲಿರುವ ಅತಿಥಿಗಳ ಕೊಠಡಿಗೆ ಈ ಸಾಧುವನ್ನು ಸಾಗಿಸಲು ತಿಳಿಸಿ, ನಮ್ಮ ಕಾವಲಿನ ಇಬ್ಬರು ಜನರನ್ನು ಕರೆಯಿಸಿ, ಸಾಧುವಿನ ಮೇಲೆ ಕಣ್ಣಿರಿಸಿ ಜತನದಿಂದಿರಲು ತಿಳಿಸಿದೆನು. ಉಳಿದ ಸಹಾಯಕರಿಕೂ ಈ ವಿಷಯದಲ್ಲಿ ಜಾಗ್ರತೆಯಿಂದಿರಲು ತಿಳಿಸಿದೆನು.

ಇದೊಂದು ತೊಳಲಾಟ. ಇತ್ತ ಸಾಧುವು ಬಂಧಿಯೂ ಅಲ್ಲ. ಅತ್ತ ಸ್ವತಂತ್ರನೂ ಅಲ್ಲ. ಒಂದು ವಾರ ಅವನು ನಮ್ಮ ವಿಚಾರಣೆಗೆ ನೆರವಾಗುವ

ಅವಶ್ಯಕತೆ ಮಾತ್ರ ಇತ್ತು. ನಾವು ಸಾಧಾರಣವಾಗಿ ಪತ್ರ ವ್ಯವಹಾರ ಮಾಡಿ ಈ ಪ್ರಕರಣದ ಸಿದ್ಧತೆ ಮಾಡುವದು ಸಾಧ್ಯವಿದ್ದಿಲ್ಲ. ಪ್ರತಿಯೊಂದು ಮಾತಿಗೂ ನಾವು ತಂತಿ ವ್ಯವಹಾರವನ್ನೇ ಅವಲಂಬಿಸುವದಿತ್ತು. ನನ್ನ ಸಹೋದ್ಯೋಗಿ ನಿಯು ನಾನು ಮನೆಗೆ ತೆರಳುವ ಮುನ್ನ ಒಂದು ಸುಂದರಾಳ ಪ್ರಕರಣದ ಇತ್ಯರ್ಥದ ಸಿದ್ಧತೆ ನನ್ನ ಪಾಲಿಗೇ ಬಿಟ್ಟದ್ದು ಎಂದು ಹೇಳಿ ಅದರಿಂದ ಮುಕ್ತಳಾಗಿ, 'ಕೈತೊಳೆದುಕೊಂಡು' ಬಿಟ್ಟಳು.

ಇಂತಾಗಿ ನಾನು ಮನೆಗೆ ಭಾರವಾದ ಮನಸ್ಸಿನಿಂದಲೇ ಹೊರಟೆನು. ಒಂದು ವಾರದಲ್ಲಿ ನಾನು ಎಲ್ಲ ಸೂತ್ರಗಳನ್ನು ಪರೀಕ್ಷಿಸಿ, ಜೋಡಿಸಿ, ಹುಸಿ ಯಿದ್ದಲ್ಲಿ ಕಿತ್ತೊಗೆದು, ಕೊರತೆಯಿದ್ದಲ್ಲಿ ತುಂಬಿ, ಸರಿಪಡಿಸಿಕೊಂಡು ಸಿದ್ಧ ನಿರಬೇಕು. ರಾತ್ರಿ ೧೧ ಗಂಟೆ. ನಡುದಾರಿಯಲ್ಲಿ ಹೆಜ್ಜೆ ಕಿತ್ತು ಕಿತ್ತು ಹಾಕುತ್ತ ಹೊರಟಿದ್ದೆನು. ಕೈಯಲ್ಲಿ ಸೈಕಲ್ಲಿದ್ದರೂ ಹತ್ತಿರಲಿಲ್ಲ. ಸಹಾ ಯಕ ಪಿಟ್ಟೆನ್ನಡೆ ಹಿಂಬಾಲಿಸಿದ್ದುದನ್ನು ನಾನು ತಿಳಿದುಕೊಂಡದ್ದು ಅರ್ಧ ದಾರಿ ದಾಟಿದ ಮೇಲೆಯೇ. ಏನೋ "ಒಂದು" ಸಳ್ಳನೆ ನನ್ನೆದುರು ದಾರಿ ಯಲ್ಲಿ ಹರಿದುಹೋಯಿತು. ಆ ಮಿಂಚು ಆ ವೇಗದಿಂದ ನಾನು ತಟ್ಟನೆ ಎಚ್ಚತ್ತೆನು ಸಹಾಯಕ ಮುಂದೆ ಬಂದು ಸಾಯಕಲ್ ದೀಪವನ್ನು ಸಿದ್ಧಪ ಡಿಸಿದನು. ಅಪ್ಪರ ಮೇಲಿಂದ ನಾನು ಅರ್ಥ ಮಾಡಿಕೊಂಡು, ಅವನ ಭುಜ ತಟ್ಟಿ, ಸೈಕಲ್ಲು ಹತ್ತಿ ಭರ್ರನೆ ಸಾಗಿದೆನು. ನಾಳೆ (ಮರುದಿನ) ಪ್ರಾತಃ ಕಾಲದ ತನಕ ನಾನು ಒಬ್ಬ ಮನುಷ್ಯ ಮಾತ್ರನಾಗಿ ನಿದ್ರಾಧಿದೇವತೆಯ ಮಡಿಲು ಸೇರಬೇಕೆಂದು ನಿರ್ಧರಿಸಿಕೊಂಡು ಮನೆ ಸೇರಿದೆನು.

ಮರುದಿನ ಎಚ್ಚತ್ತಾಗ ಎಂಟು ಗಂಟೆ. ಮಲಗಿದ ಮಗ್ಗಲು ನಾನು ಬದಲಿಸಿರಲಿಲ್ಲ. ನಾನು ಎದ್ದು ಪ್ರಾತರ್ವಿಧಿಗಳನ್ನು ಮುಗಿಸಿ ಸ್ನಾನಮಾಡಿ ಹೊರಬಂದಾಗ ಹೊಸ ಮನುಷ್ಯನಾಗಿ ಬಂದಿದ್ದೆನು.

ಊಟಮುಗಿಸಿ ಅಂದು ನಾನು ನಡೆದುಕೊಂಡು ಹೊರಹೊರಟೆನು. ನನ್ನ ಕಾರ್ಯಾಲಯಕ್ಕೆ ಬಂದಾಗ ಮಕ್ಕಳೊಡನೆ ಹರಪ್ರಸಾದನು ಸರಸವನ್ನು

ನಡೆಯಿಸಿದ್ದನು. ಎಂದೂ ಒಬ್ಬಳೇ ಹೊರಗೆ ಕಾಣಿಸಿಕೊಳ್ಳದ ಸುಂದರಾ ಅಂದು ನಮ್ಮ ಸಹೋದ್ಯೋಗಿನಿಯ ಪಕ್ಕದಲ್ಲಿ ನಿಂತು ಅವರಿಗಾಗಿ ಒಂದು ಚಿಕ್ಕ ಹೂವಾಲೆಯನ್ನು ಮಾಡುತ್ತಿದ್ದಳು. ಸಹೋದ್ಯೋಗಿನಿ ಅಂದಿನ ಇಂಗ್ಲಿಷ ಪತ್ರಿಕೆಯಲ್ಲಿ ಮಗ್ನಳಾಗಿ ಸುತ್ತುಮುತ್ತನ್ನೇ ಮರೆತು ಬಿಟ್ಟಿದ್ದಳು. ನಾನು ಈ ಪರವಶತೆಯನ್ನು ಕಂಡು ಮುಗುಳ್ನಗೆ ನಗುತ್ತ ಒಳಗೆ ಹೋದೆನು. ನನ್ನ ಮುಗುಳ್ನಗೆ ಇನ್ನೂ ನನ್ನ ಮುಖದ ಮೇಲೆಯೇ ತೇಲುತ್ತಿರಬೇಕು. ಅಷ್ಟರಲ್ಲಿ ನನ್ನ ಸಹಾಯಕ ಬಂದು ಎಲ್ಲ ಸಿದ್ಧತೆಗಳನ್ನು ಅಣಿಗೊಳಿಸಿ ಆಸನ ವನ್ನು ತಂದಿರಿಸಿದ. ಆತನೂ ನಗುತ್ತ ನನಗೊಂದು ಪ್ರಶ್ನೆ ಮಾಡಿದನು: "ಇದೇನು ತಾವು ಇಂದು ಇಷ್ಟು ಸಂತೋಷದಿಂದಿರುವಿರಿ? " ನನ್ನ ಮುಂದಿನ ಮಾತಿಗೆ ಅವನು ಇನ್ನೂ ಅಷ್ಟು ಹೆಚ್ಚು ಗಟ್ಟಿಯಾಗಿ ನಗಲಾರಂಭಿಸಿದನು :

" ಏನಿಲ್ಲ, ಇಷ್ಟು ಜನರಲ್ಲಿ ಈ ನಗೆಯ ಮಹಾಪೂರಕ್ಕೆ ಕಾರಣ ರಾರು ಎಂಬುದೇ ನನಗೆ ತಿಳಿಯದಾಗಿದೆ. ಹರಪ್ರಸಾದನೋ, ಸುಂದರಾಳೋ ನೀನೋ, ಅಧಿಕಾರಿಣಿಯೋ ಅಥವಾ ನಾನೋ ? "

"ನಗೆ ಬರುನಂತೆ ಇಲ್ಲಿ ನಡೆದಿರುವ ಚಟುವಟಿಕೆಗಳೇ ಕಾರಣ. ನಾವು ಯಾರೂ ಅಲ್ಲ. ಆ ಸುಂದರಾ ಇಂದು ಹೊರಬಂದಿದ್ದಾಳೆ. ಈ ಹರಪ್ರಸಾದ ಇಂದು ಹುಡುಗರಲ್ಲಿ ಹುಡುಗನಾಗಿದ್ದಾನೆ. ಅಧಿಕಾರಿಣಿ ಸ್ವಸ್ಥ ಜಗತ್ತಿನ ವಿಚಾರ ಅಭ್ಯಾಸ ಮಾಡುತ್ತಿದ್ದಾರೆ. ಆ ಸಾಧು ಮಹಾಶಯ ಅಲ್ಲಿ ಬಾವಿಯ ಕಟ್ಟೆಯ ಮೇಲೆ ನಿಂತು ಮಕ್ಕಳ ಮೈ ಕೈಗಳನ್ನು ತಿಕ್ಕಿ ತೊಳೆಯುತ್ತಿದ್ದಾನೆ. ಅವನಿಗೆ ಹತ್ತಿರುವ ಬಾಳುವೆಯನ್ನು ತಾವು ನೋಡಬೇಕು. ಈಗ ಮುಗುಳು ನಗೆ ನಗುತ್ತೀರಿ. ಆಗ ಕೇಕೆ ಹಾಕುತ್ತೀರಿ. " ಎಂದನು ಸಹಾಯಕ. ನಾನು ಹೊರಗೆ ಹೋಗಿ ಸಾಧುವಿನ ಸಂಸಾರ ನೋಡಿ ನಗಲಾರಂಭಿಸಿದೆನು. ನನ್ನ ನಗೆ ಒಮ್ಮೆ ಶಬ್ದ ಮಾಡಹತ್ತಿದರೆ ಮನೆಯ ಮಾಳಿಗೆ ಹಾರಿಯೇ ಬೀಳಬೇಕು. ಮಾಳಿಗೆ ಅಂದು ಹಾರಿ ಬೀಳಲಿಲ್ಲ. ಅಂದು ಹಾರಿ ಬಿದ್ದವರು ಎಲ್ಲ ಮಕ್ಕಳು. ಅಧಿಕಾರಿಣಿ ಹೌಹಾರಿ ಓಡಿಬಂದು ನನ್ನ ಬದಿಗೆ ನಿಂತು ನಾನು ಕೈಮಾಡಿ ತೋರಿಸಿ ತೋರಿಸಿ ನಗುತ್ತಿದ್ದ ದೃಶ್ಯ ನೋಡಿ ಅವರೂ ನಗಲಾರಂಭಿಸಿದರು.

ಅವರು ನಗುವದೆಂದರೆ ಅರಿಯದವರಿಗೆ ಅವರು ಅಳುವರೆಂದೇ ಭಾಸವಾಗುತ್ತಿತ್ತು.

ಸಾಧು ಕಕ್ಕಾಬಿಕ್ಕಿಯಾಗಿ ಎದ್ದು ನಿಂತನು. ಅರೆಕ್ಷಣದಲ್ಲಿ ವಿಷಯ ತಿಳಿದು ಅವನೂ ನಗುತ್ತ ಮುಂದೆ ಬಂದನು. ಅವನ ನಗೆಯಲ್ಲಿ ನಿಷ್ಕಲ್ಮಷ ಭಾವವು ವ್ಯಕ್ತವಾಗಿದ್ದನ್ನು ನಾನು ಕಂಡು ಪರಮಾನಂದದಿಂದ ನನ್ನ ಮುಂದಿನ ಕಾರ್ಯಕ್ಕೆ ತೆರಳಿದೆನು.

## [೨೦]

ನಮ್ಮ ನಗರದ ಸಮೀಪದಲ್ಲಿ ಎರಡು ಮೈಲುಗಳ ಅಂತರದಲ್ಲಿ ರಾಷ್ಟ್ರೀಯ ವಿಶಾಲ ಮಾರ್ಗಕ್ಕೆ ಹೊಂದಿ ಬಲಕ್ಕೆ ಒಂದು ಹಳ್ಳಿಯಿದೆ. ಮಾರ್ಗದ ಎಡಕ್ಕೆ ಒಂದು ದೊಡ್ಡ ಜಲಾಶಯವಿದೆ. ನಮ್ಮ ನಗರಕ್ಕೆ ನೀರಿನ ಪೂರೈಕೆಯಾಗುವದು ಈ ಜಲಾಶಯದಲ್ಲಿರುವ ಯಂತ್ರಾಲಯದಿಂದಲೇ. ಈ ಯಂತ್ರಾಲಯದ ಸುತ್ತು ಒಂದು ವಿಶಾಲ ಸುಂದರ ತೋಟವಿದೆ. ಇದು ವನಭೋಜನಕ್ಕೆ ಬಹು ಪ್ರಶಸ್ತವಾಗಿದೆ. ಬೇಕಾದಷ್ಟು ಜನರು ಒಂದೆಡೆ ಕುಳಿತು ವಿರಾಮವಾಗಿ ಭೋಜನ ಮಾಡುವಷ್ಟು ವಿಶಾಲವಾಗಿದೆ. ಇಲ್ಲಿಯೇ ನಮ್ಮ ವಸತಿಗೃಹದ ಮಕ್ಕಳನ್ನು ವನಭೋಜನಕ್ಕೆ ಮರುದಿನ ಕರೆದೊಯ್ಯಬೇಕೆಂದು ಸಹಾಯಕರಿಗೆ ತಿಳಿಸಿದೆನು. ಸಹೋದ್ಯೋಗಿನಿಯನ್ನು ಕರೆಯಿಸಿ ಆವಶ್ಯವಿರುವ ಎಲ್ಲ ಊಟೋಪಚಾರದ ವ್ಯವಸ್ಥೆಗೆ ಅಣಿಮಾಡಲು ತಮ್ಮ ಸಹಾಯಕ ವರ್ಗಕ್ಕೆ ತಿಳಿಸಲು ಸೂಚಿಸಿದೆನು.

ನ್ಯಾಯಾಲಯವು ನಡೆದ ದಿನ ನ್ಯಾಯಾಧೀಶರು ಆಜ್ಞೆ ಮಾಡಿದಂತೆ, ನಾವು ಮರುದಿನ ಎಲ್ಲ ಪೂರ್ವದ ಸಿದ್ಧತೆಗಳನ್ನು ಮಾಡಿಕೊಂಡೆವು. ಆದರ ಮರುದಿನ ನಾವು ವನಭೋಜನಕ್ಕೆ ಎಲ್ಲ ಮಕ್ಕಳೊಡನೆ ಎಲ್ಲ ಅಧಿಕಾರಿ

ವರ್ಗದವರೂ ಮತ್ತು ಸಹಾಯಕ ವರ್ಗದವರೂ ಹೊರಟೆವು. ವನಭೋಜನದ ವ್ಯವಸ್ಥೆಯನ್ನು ನಾನು ಹಿಂದೆ ಹೇಳಿದ ಮಾರ್ಗದ ಬಲಬದಿಯ ಹಳ್ಳಿಯ ದೊಡ್ಡ ಜಮೀನುದಾರರು ಒಪ್ಪಿಕೊಂಡಿದ್ದರು.

ಈ ಸಾಮೂಹಿಕ ಜೀವನದ ಅತಿ ಸ್ವಲ್ಪ ಅವಧಿಯಲ್ಲಿಯೇ ನಾವು ಸುಂದರಾ ಮತ್ತು ಹರಪ್ರಸಾದರ ಪ್ರಕರಣಗಳ ಕೊನೆಯ ಹಂತದ ಇತ್ಯರ್ಥವನ್ನು ಮಾಡುವ ವಿಚಾರವನ್ನಿಟ್ಟುಕೊಂಡಿದ್ದೆವು. ಅಂತೆಯೆ ವನಭೋಜನಕ್ಕೆ ಸಾಧು ಮಹಾನುಭಾವನನ್ನೂ ಕರೆತರಲು ನಮ್ಮ ಸಹಾಯಕರಿಗೆ ತಿಳಿಸಿದ್ದೆನು.

ಮಕ್ಕಳ ಮನಸ್ಸಿನೊಡನೆ ವ್ಯವಹಾರ ಮಾಡುವದು ಒಂದು ದೊಡ್ಡ ಕಲೆ. ಅದೊಂದು ಶಾಸ್ತ್ರವೂ ಆಹುದು.

ಕಲೆಯು ಶಾಸ್ತ್ರದ ಪೂರ್ವಪೀಠಿಕೆಯನ್ನು ಹಾಕುತ್ತದೆ. ಯಾವುದೊಂದು ಸಿದ್ಧಾಂತವನ್ನು ನಾವು ನಿಶ್ಚಯಗೊಳಿಸುವ ಪೂರ್ವದಲ್ಲಿ ಕಲೆಯು ಮಾನವೀಯವಾದ ಅಂತಃಕರಣದ ಸೂಕ್ಷ್ಮ ಅವಲೋಕನೆಗಳಿಂದ ಸತ್ಯದ ಬಹುಮುಖಗಳನ್ನು ಅಳೆಯುವದಲ್ಲದೆ, ಈ ಸತ್ಯಶೋಧನೆಯ ಮಾರ್ಗದಲ್ಲಿ ಅಲ್ಲಲ್ಲಿ ಗುರುತಿನ ಹೆಜ್ಜೆಗಳನ್ನು ಇರಿಸುತ್ತ ಮುಂದೆ ಸಾಗುವದು. ಈ ಹೆಜ್ಜೆಗಳನ್ನು ಗುರುತಿಸಿ, ಮುಂದೆ ಹೆಚ್ಚು ಹೆಚ್ಚು ದೃಷ್ಟಾಂತಗಳಿಂದ ಪ್ರಮಾಣಿಸಿ, ಶಾಸ್ತ್ರಕಾರನು ಸತ್ಯವನ್ನು ತಾತ್ವಿಕವಾಗಿ ಸಶಾಸ್ತ್ರೀಯವಾಗಿ ದೃಢಪಡಿಸುವನು. ಕಲೆ ಮತ್ತು ಶಾಸ್ತ್ರ ಅಥವಾ ವಿಜ್ಞಾನಗಳ ಸಂಬಂಧ ಪರಸ್ಪರ ಪೂರಕವಾದುದು. ಅತ್ಯಂತ ತೆಳ್ಳಗಿನ ಅಸ್ಪಷ್ಟ ಗೆರೆಯೊಂದು ಇವುಗಳ ಸೀಮೆಗಳನ್ನು ಬೇರ್ಪಡಿಸಿದೆ. ಮಕ್ಕಳ ಜೀವನದೊಡನೆ ಚಲ್ಲಾಟವಾಡುವ ಹೊಣೆ ಅರಿಯದ ಅಧಿಕಾರಿಯು ಇಂತಹ ಸೂಕ್ಷ್ಮ ಸಮಯದಲ್ಲಿ ಮಾನವೀಯ ಭಾವದಿಂದ ನಡೆದುಕೊಳ್ಳದಿರುವದರಿಂದಲೇ ಮಕ್ಕಳ ಎಷ್ಟೋ ಎಳೆಯ ಜೀವನಗಳು ಮುಗ್ಗುರಿಸಿ ಮಣ್ಣುಪಾಲಾಗಿವೆ.

ಮಕ್ಕಳನ್ನು ಒಳ್ಳೆಯ ಪಕ್ಷದ ಕಡೆಗೆ ಒಲಿಸಿಕೊಳ್ಳುವ ಸೌಭಾಗ್ಯ ಅವಕಾಶಗಳು ಅಧಿಕಾರಿಗಳಿಗೆ ಮೇಲಿಂದ ಮೇಲೆ ದೊರೆಯುತ್ತಿರುವವು.

(fortunate occasions & opportunities to win over children to the good side are many and frequent ) ಈ ಸಂತೋಷಕ್ಕೆ ಎರವಾಗುವ ಅಧಿಕಾರಿಗಳು ಬಹಳ. ಯಾವುದೊಂದು ಕಲೋಪಾಸನೆ ಅಥವಾ ಶಾಸ್ತ್ರಾನ್ವೇಷಣೆ ಯಾರೊಬ್ಬರ ಪಾಲಿನ ಮೀಸಲು ಅಲ್ಲ ಪ್ರತಿಯೊಬ್ಬನು ಇವುಗಳಲ್ಲಿ ಪರಿಣತನಾಗಬಹುದು. ಆದರೆ ಈ ಪರಿಣತಿಗೆ ಮಾನವೀಯ ದೃಷ್ಟಿಕೋನ ಮತ್ತು ಸಹೃದಯತೆ ಅತ್ಯ ವಶ್ಯ. ಹೃದಯವಿಲ್ಲದವ ಕಲಾವಿದನಾಗಲಾರ. ಶಾಸ್ತ್ರಪಾರಂಗತನಾಗಲಾರ. ಪಾಂಡಿತ್ಯವೆಂದಿಗೂ ಶುಷ್ಕವಲ್ಲ. ನೀರಸವಲ್ಲ.

ನಾವು ಸಾಧುವಿನ ಭೀಕರತೆಯನ್ನು ಅಳಿಸಿಹಾಕಿ ಸುಂದರಾಳ ಮನ ಸ್ಸಿನ ಮೇಲೆ ಅವನ ನಿರಪರಾಧಿತ್ವವನ್ನು ಒತ್ತಾಯದಿಂದ ಹೇರಬಹುದಿತ್ತು. ಅದು ಕೃತಕ ಯಶಸ್ಸನ್ನೂ ಪಡೆಯಬಹುದಿತ್ತು. ನಮಗೆ ಬೇಕಾದುದು ಪ್ರಾಮಾಣಿಕ ಪರಿವರ್ತನೆ. ಅವಳ ಭಾವನೆಗಳಲ್ಲಿ ಸಾಧು ಒಬ್ಬ ನಿರ್ದಯಿ ಸ್ತ್ರೀಕಂಟಕ. ಅವಳ ಭೀತಿಗೆ ಕಾರಣೀಭೂತನಾದ ಒಂದು ಭಯಂಕರ ವಸ್ತು-- ಸಾಧು. ನೇರವಾಗಿ ಸಾಧುವಿನ ಬಗೆಗೆ ಅವಳ ಅಭಿಪ್ರಾಯವನ್ನು ತಿಳಿಸು ವಂತೆ ನಾವು ಅವಳಿಗೆ ಕೇಳಬಹುದಾಗಿತ್ತು. ಆದರೆ ನಮಗೆ ಸುಂದರಾ ಎಂದಿಗೂ ತನ್ನ ಹೃದಯವನ್ನು ಬಿಚ್ಚಿ ತೋರಿಸಳೆಂಬುದು ನನಗೆ ಅನುಭವ ದಿಂದ ತಿಳಿದುಬಂದ ಮಾತು. ಅವಳ ಆಸಕ್ತಿಯನ್ನು ಕೆರಳಿಸಿ ಅವಳು ತಾನೇ ತನ್ನ ಸ್ಫೂರ್ತಿಯಿಂದ ನಮ್ಮ ಮಾತುಕತೆಗಳಲ್ಲಿ ಭಾಗತೆಗೆದುಕೊಳ್ಳು ವಂತೆ ಮಾಡುವದೇ ನನ್ನ ಉದ್ದೇಶವಾಗಿತ್ತು. ಈ ಹಾದಿಗೆ ಅಣಿಮಾಡಲು ನಾವು 'ರಂಗ'ವನ್ನು 'ಹೊಯ್ಯು'ವದಿತ್ತು.

ಅಲ್ಲಲ್ಲಿ ಇಂದಿಗೂ ಸಂದಿಗೊಂದಿಗಳಲ್ಲಿ, ಹಳ್ಳಿ-ಪಟ್ಟಣಗಳಲ್ಲಿ 'ದೆವ್ವ ಭೂತ'ಗಳನ್ನು ಬಿಡಿಸುವವರು "ರಂಗ-ಹೊಯ್ಯು"ವದನ್ನು ನೀವು ಕಂಡಿರಬ ಹುದು. ಈಗ ರಂಗ- ಹೊಯ್ಯುವವರು ಮಾಡುವ ಅಣಕಗಳು ನಗೆ ಬರು ವಂತಿವೆ. ಹಿಂದಿನವರು ಕೆಲವೊಂದು ಸಿದ್ಧಾಂತಗಳನ್ನು ಅಂದಿನ ಮಾನ ಸಿಕ ಅವ್ಯಾಪಾರಗಳ ವಿಮೋಚನೆಗಾಗಿ ಕಂಡುಹಿಡಿದು ಕೆಲವು ಸಶಾಸ್ತ್ರೀಯ

ವಿಧಾನಗಳಿಂದ ರಂಗ-ಹೊಯ್ಯುತ್ತಿರಬೇಕು. ಇಂದು ಆ ಶಾಸ್ತ್ರವೂ ಇಲ್ಲ. ಕಲಾತ್ಮಕ ವಿಧಾನಗಳೂ ಇಲ್ಲ. ಕೇವಲ "ಹುಣಸೆ ಬರಲಿನ ಬಾಸಾಳ"ಗಳು ಮಾತ್ರ ಉಳಿದಿವೆ. ಬಡಪ್ರಾಣಿಗಳಿಗೆ-ಮಾನಸಿಕ ಅಶಕ್ತರಿಗೆ.

ನಾನು ಚಿಕ್ಕವನಿದ್ದಾಗ ಹಳ್ಳಿಯಲ್ಲಿ ನಮ್ಮ ಹಿರಿಯ ಅಜ್ಜ-ತಾತಂದಿರು ತಮ್ಮ ಸೂಕ್ಷ್ಮ ನಡುವಳಿಕೆಗಳಿಂದಲೇ ಅದೃಷ್ಟ "ರಂಗ ಹೊಯ್ದು" ಎಷ್ಟೋ ಅಶಕ್ತರನ್ನು ಹಾದಿಗೆ ಹಚ್ಚಿದ್ದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಅವರು ಯಾವ ಬೆಂಕಿಯಲ್ಲಿಯೂ ಯಾವ ಗುಗ್ಗಳವನ್ನೂ ಉಪ್ಪು ಮೆಣಸಿನಕಾಯಿ ಗಳನ್ನೂ ಇನ್ನಿತರ ವಸ್ತುಗಳನ್ನೂ ಹಾಕುತ್ತಿದ್ದಿಲ್ಲ. ಅವರು ಉಪಯೋಗಿಸುತ್ತಿದ್ದುದು ಆಧ್ಯಾತ್ಮಿಕ ಅಗ್ನಿ. ಸಾತ್ವಿಕ ಗುಗ್ಗಳ. ಉಪ್ಪು ಮೆಣಸಿನ ಕಾಯಿಗಳೆಂದರೆ ಅವರ ನಗೆ ಮಾತು ಇಲ್ಲವೆ ಸೂಕ್ಷ್ಮ ಚುಟುಕಿನ ಹೃದಯವನ್ನೇ ತಲ್ಲಣಿಸುವ ಮಾತುಗಳು. ಕುಸುಮ ಮೃದು ವಜ್ರ ಕಠೋರವಾದ ಅಂದಿನವರ ಜೀವನಗಳು ಅಶಕ್ತರನ್ನು ಪರಿವರ್ತನೆಗೊಳಿಸುವಲ್ಲಿ ಹೆಚ್ಚಿನ ಪಾತ್ರ ನಿರ್ವಹಿಸುತ್ತಿದ್ದವು.

ನಾವು ಹೊಯ್ದ (ರಚಿಸಿದ) ರಂಗವು ಸುಂದರಾಳ ಭಯಕಂಪಿತ ಹೃದಯವನ್ನು ಅಂತಃಕರಣದ ಅನುಕಂಪದ ಅವಸ್ಥೆಗೆ ಮುಟ್ಟಿಸಬೇಕಿತ್ತು. ಸಾಧು ಮಹಾಶಯನಿಗೆ ಮಕ್ಕಳ ಗುಂಪಿನಲ್ಲಿ ಮುಕ್ತ ಪ್ರವೇಶವನ್ನೀಯಲು ಸಹಾಯಕರಿಗೆ ಕಟ್ಟುಸಿಟ್ಟಾದ ಆಜ್ಞೆ. ಗುಪ್ತ ಆಜ್ಞೆ. ಮಕ್ಕಳ ಮನರಂಜನೆ ಮಕ್ಕಳ ಊಟೋಪಚಾರದ ಮೇಲ್ವಿಚಾರಣೆ ಸಾಧುವಿಗೆ ಒಪ್ಪಿತ. ಇದರ ಅರ್ಥ ಸಹಾಯಕರು ರಂಗಸ್ಥಳದಿಂದ ದೂರರೆಂದಲ್ಲ. ರಂಗಮಂಟಪದಲ್ಲಿ ಅವರ ಮತ್ತು ಅಧಿಕಾರಿಗಳ ಸ್ಥಾನಗಳು ಆಯಕಟ್ಟಿನ ಸ್ಥಾನಗಳು. ಸೂತ್ರಧಾರೀ ಸ್ಥಾನ.

ರಂಗಭೂಮಿಯ ಮೇಲೆಯೇ ನುರಿತ ಪಾತ್ರಧಾರಿಗಳು ಮೆಲ್ಲಗೆ ಮಾತು ಹೇಳುವವರು (prompters) ಆಗಿ ಇರುವರು. ಅಲ್ಲಿ ಉಳಿದ ಹೊಸ ನಟನಟಿಯರಿಗೆ ಇವರು ಹೇಳಬಲ್ಲರು. (prompters) ಎಂಬುದಾ

ದರೂ ಗೊತ್ತಿರುವದು. ಆದರೆ ಇಲ್ಲಿ ಹೇಳಿ ಕೊಡುತ್ತಿರುವವರು (promp ters) ಎಂಬ ಕಲ್ಪನೆ ಸಹ ಬಾರದಂತೆ ನಾವು ಈ ಹೊಸಬರಿಂದ 'ಪಾತ್ರ' ಆಡಿಸಬೇಕಾಗಿರುವದೇ ನಮ್ಮ ಕಾರ್ಯಕೌಶಲ್ಯದ ವೈಶಿಷ್ಟ್ಯ.

ಇಲ್ಲಿ ಪ್ರತಿಯೊಂದು ಘಟನೆ ಸ್ವಾಭಾವಿಕವಾಗಿ ಯಾವ ಒತ್ತಾಯ ಆಕಾಂಕ್ಷೆಗಳಿಲ್ಲದೆ ಸ್ವಯಂ ಪ್ರಚೋದನೆಯಿಂದ ವಿಕಾಸವಾಗಿ ಮೂಡಿ ಬರ ಬೇಕು. ಆಂದಾಗ ಮಾತ್ರ ಈ ಮಾನಸಿಕ ಪರಿವರ್ತನೆಯ ಕಾರ್ಯ ಪರಿ ಪೂರ್ಣತೆಯ ಹಾದಿಯಲ್ಲಿ ಹೆಜ್ಜೆಯಿಡುವದು.

## (೨೧)

ವಸತಿಗೃಹದ ಮಕ್ಕಳು ವನಭೋಜನಕ್ಕೆ ಹೊರಟ ದಿನ ಹಳ್ಳಿಗರು ತಮ್ಮ ಹೊಲಗಳಿಗೆ ಹೋಗಿರಲಿಲ್ಲ. ಹಳ್ಳಿಗರು ವಾರದಲ್ಲಿ ಒಂದು ದಿನ ತಮ್ಮ ದನಕರುಗಳಿಗೆ ವಿಶ್ರಾಂತಿ ಕೊಡುವ ದಿನ ಅದು. ಈ ವಿಶ್ರಾಂತಿಯನ್ನು ಅವರು ಹೊರಗಿನವರ ಯಾವ ಒತ್ತಾಯವಿಲ್ಲದೆ ಧಾರ್ಮಿಕ ಬುದ್ಧಿಯಿಂದ ಕೊಡುವರು. ಅಂದು ಅವರು ತಮ್ಮ "ಜೋಡೆತ್ತು"ಗಳನ್ನು ಸಮೀಪದ ಜಲಾಶಯಕ್ಕೆ ಒಯ್ದು ಮೈತೊಳೆದು ಶುಚಿಮಾಡಿ ಮನೆಗೆ ತಂದು ಹರ್ಷ ದಿಂದ ಪೂಜಿಸಿ ಮೇಯಿಸುವರು. ಅಂದು ಅವರೂ ತಮ್ಮ ಗೃಹಕಾರ್ಯಗ ಳನ್ನು ಪೂರೈಸಿಕೊಳ್ಳುವರು. ದೇವಾಲಯಗಳಿಗೆ ಕಾಯಿಕರ್ಪೂರದೊಂದಿಗೆ ಹೋಗಿಬರುವರು.

ಈ ದಿನ ಅಂದು ಆ ಹಳ್ಳಿಯ "ದೊಡ್ಡ ಆರಂಭ"ದ ಜಮೀನುದಾರರು ಸಂಪ್ರದಾಯದಂತೆ ತಮ್ಮ "ಪಶುಸಂಪತ್ತು" "ಗೃಹಕಾರ್ಯ" ಮತ್ತು "ಇಷ್ಟದೇವತಾರ್ಚನೆ" ಇವುಗಳಲ್ಲಿ ಮಗ್ನರಾಗಿದ್ದುದಲ್ಲದೇ, ನಮ್ಮ ವಸತಿ ಗೃಹದ ಮಕ್ಕಳ ವನಭೋಜನಕ್ಕಾಗಿ, ಊಟೋಪಚಾರದ ವ್ಯವಸ್ಥೆಯನ್ನೂ ಮಾಡಿಸಿ, ನಾವು ಆಯ್ಕೆಮಾಡಿದ ವನಸ್ಥಳಕ್ಕೆ, ತಾವು ಸಿದ್ಧಗೊಳಿಸಿದ ಸಾಮ

ಗ್ರಿಗಳೆಲ್ಲವನ್ನೂ ಕಳಿಸಿದ್ದರು. ವಸತಿಗೃಹದಿಂದ, ಮಕ್ಕಳು ನಸುಕಿನಲ್ಲಿಯೇ ಎದ್ದು ಪ್ರಾತರ್ವಿಧಿ ಸ್ನಾನಾದಿಗಳನ್ನು ಮುಗಿಸಿಕೊಂಡು ಪಾದಚಾರಿಗಳಾಗಿ ವನಭೋಜನಕ್ಕೆ ಹೊತ್ತು ಏರುವದರಲ್ಲಿಯೇ ಹೊರಟಿದ್ದರು. ನಗರದ ಬೀದಿಗಳನ್ನು ದಾಟಿ, ಅವರು ಮುಖ್ಯ ಮಾರ್ಗಕ್ಕೆ ಪೂರ್ಗಕ್ಕೆ ಬರುವಾಗ ನಾನು ಹೋಗಿ ಆ "ಯಾತ್ರೆ"ಯನ್ನು ಕೂಡಿಕೊಂಡೆನು.

ಸಾಧು ಮಹಾಶಯ ಮಕ್ಕಳ ಗುಂಪಿನಲ್ಲಿದ್ದನು. ಸಹಾಯಕರಿಗೆ ಕೊಟ್ಟ ನಮ್ಮ ಸೂಚನೆಯಂತೆ ಅವರು ಅವನನ್ನು ಮಕ್ಕಳ ಮೇಲ್ವಿಚಾರಣೆಗೆ ಬಿಟ್ಟು ತಾವು ಸುತ್ತು ಅದೃಶ್ಯ ಕಾವಲಿಗರಾಗಿ ಸಾಗಿದ್ದರು.

ನಾನು ಈ ಗುಂಪಿನಲ್ಲಿ ಎರಗಲಿಲ್ಲ. ಅಂಚಿನಲ್ಲಿಯೇ ಇದ್ದುಕೊಂಡು ಸಾಧುವಿಗೆ ಒಂದು ಪ್ರಶ್ನೆ ಕೇಳಿ ಮಾತಿಗೆ ಪೀಠಿಕೆ ಹಾಕಿದೆನು.

"ಅದೇನು ಮಹಾಶಯ ! ಮೊನ್ನೆ ಕೋರ್ಟಿನಲ್ಲಿ ನಿಮ್ಮೂರಿನ ಜಮೀನದಾರನ ಹೆಸರು ಹೇಳಿದಿರಲ್ಲ ನಾನು ಮರೆತು ಬಿಟ್ಟೆ. ಅವರಿಗೆ ನಮ್ಮಲ್ಲಿಂದ ಪತ್ರ ಬರೆಯಬೇಕಿತ್ತು."

ಜಿಗಿದು ಮುಂದೆ ಬಂದು ಹೇಳಿದನು ಸಾಧು ಮಹಾಶಯ–ಉತ್ಸಾಹದಿಂದ :

"ಧನಪಾಲ. ಧನಪಾಲ. ಸ್ವಾಮಿ. ಅವಶ್ಯ ಪತ್ರ ಬರೆಯಿರಿ. ನಾನು ತಮಗೆ ಮತ್ತಿನ್ನಾವ ವಿಷಯ ತಿಳಿಸಬೇಕು ಹೇಳಿರಿ. ಎಲ್ಲವನ್ನೂ ಸಾದ್ಯಂತವಾಗಿ ತಿಳಿಸುತ್ತೇನೆ."

ಮೀನು ಸರ್ರನೆ ಬಂದಿತು. ಗಾಳಕ್ಕೆ ಸಿಕ್ಕಿಸಿಲ್ಲವೆ ತುಣುಕು ಆಹಾರವನ್ನು. ಅಣ್ಣನ ಹೆಸರು ಕೇಳಿದ ಸುಂದರಾ ಸ್ಥಳ ಬಿಟ್ಟು ಸಮೀಪದ ಸ್ಥಳಕ್ಕೆ ಸ್ವಾಭಾವಿಕವಾಗಿ ಬರುವಂತೆ ಬಂದಳು. ಕುಶಲ ಕಣ್ಣುಗಳು–ನಿರೀಕ್ಷಣೆಯಲ್ಲಿದ್ದ ಕಣ್ಣುಗಳು– ಈ ಸ್ಥಳಾಂತರವನ್ನು ಗಮನಕ್ಕೆ ತಂದುಕೊಂಡವು. ಸುತ್ತಲಿದ್ದ ಸಹಾಯಕ ವರ್ಗ ಎಚ್ಚತ್ತು ಮುಂದಿನ ಘಟನೆಗಳನ್ನು ನಿರೀಕ್ಷಿಸಹತ್ತಿತು.

ನಾನು ಮತ್ತೊಂದು ಪ್ರಶ್ನೆಯನ್ನು ಸಾಧುವಿಗೆ ಕೇಳುವ ಅವಶ್ಯಕತೆಯೇ ಇರಲಿಲ್ಲ. ಮಕ್ಕಳಲ್ಲಿಯೇ ಸ್ವಾಭಾವಿಕವಾಗಿ ಕುತೂಹಲ ಕೆರಳಿತು. ಅವರೇ ಒಬ್ಬೊಬ್ಬರಾಗಿ ಅವನಿಂದ ಆ "ಧನಪಾಲ" ಶಬ್ದದ ಪೂರ್ವಾಪರವನ್ನು ವಿಚಾರಿಸಹತ್ತಿದರು. ನಾನು ಮತ್ತು ನಮ್ಮ ಸಹೋದ್ಯೋಗಿಗಳೂ ಸಹಾಯಕರೂ ಬೇರೆ ಮಾತುಗಳಲ್ಲಿ ತಲ್ಲೀನರಾದವರಂತೆ ಮುಂದೆ ಮುಂದೆ ಸಾಗುತ್ತಿದ್ದೆವು. ಸಾಧುವಿಗೆ ಮಾತ್ರ ನಾಲಿಗೆಯನ್ನು ನಿಯಂತ್ರಿಸಿಕೊಂಡಿರುವದು ಸಾಧ್ಯವಿರಲಿಲ್ಲ. ಒಂದೊಂದಾಗಿ ಕ್ರಮಶಃ ತಾನು ಊರು ಬಿಟ್ಟಂದಿನಿಂದ ನಮ್ಮ ನಗರದ ನಿಲ್ದಾಣವನ್ನು ಮುಟ್ಟುವತನಕ ನಡೆದ ಘಟನೆಗಳನ್ನು ವಯಸ್ಸಾದವರು ಸಣ್ಣ ಮಕ್ಕಳಿಗೆ ಹೇಳಬೇಕಾದ ರೀತಿಯಲ್ಲಿ ಇತಿಮಿತಿಯನ್ನರಿತು. ಆ ಸಾಧುವು ಹೇಳಿದನು. ಅವನು ಹೇಳುವಾಗ ತನ್ನ "ಸಾಧು" ತನಕ್ಕೆ ಭಂಗ ತಂದುಕೊಳ್ಳದಂತೆ ಘಟನೆಗಳನ್ನು ನಿರೂಪಿಸಬೇಕಷ್ಟೆ. ಈ ನಿರೂಪಣೆಯನ್ನು, ನಾವು ಹೇಳಿ ಕಲಿಸಿದರೆ, ಇಷ್ಟು ವ್ಯವಸ್ಥಿತವಾಗಿ ಅವನು ಹೇಳುತ್ತಿರಲಿಲ್ಲ. ಅವನು ಕೇವಲ ಐದಾರು ಪ್ರಮುಖ ಘಟನೆಗಳಿಗೆ ಮಾತ್ರ ಸಂಬಂಧಿಸಿ ನಿರೂಪಿಸಿದನು. ಅದು ಬಹಳ ಪರಿಣಾಮಕಾರಿಯಾಗಿತ್ತು. ಅವನ ಮಾತು ಹಿಂದಿಯಲ್ಲಿ- ಮಕ್ಕಳಿಗೆ ತಿಳಿಯುವ ಹಿಂದಿಯಲ್ಲಿ. ಸುಂದರಾಳ ಮುಖವನ್ನು ನಾವು ಅವಳಿಗರಿಯದಂತೆ ಪರೀಕ್ಷಿಸುತ್ತಿದ್ದೆವು. ಅವಳ ಮೊದಲನೆಯ ಶೀಘ್ರ ಪ್ರತಿಕ್ರಿಯೆಯೆಂದರೆ ಅವಳ ಮುಖದ ಮೇಲೆ ಮೂಡಿದ ಪ್ರಶ್ನಾರ್ಥಕ ಚಿಹ್ನೆಯ ಭಾವ. ಅವಳು ಆ ಭಾವವನ್ನಿರಿಸಿಕೊಂಡೇ ಎಲ್ಲ ವಿಷಯಗಳ ಸಂಗ್ರಹವನ್ನು—ಸಾಧು ಹೇಳುತ್ತಿದ್ದಂತೆಯೇ-ಮಾಡಿಕೊಳ್ಳುತ್ತಿದ್ದಳೆಂಬುದನ್ನು ನಾವು ಅವಳ ಮುಖದ (ಕಣ್ಣು ಮೂಗು ಬಾಯಿ) ವಿವಿಧ ಭಾವ ವಿನ್ಯಾಸಗಳಿಂದ ತಿಳಿದುಕೊಳ್ಳುತ್ತಿದ್ದೆವು. ಅದೊಂದು ಮಹಾ ಅನುಭವ. (It was a great experience.)

ಆ ಹಸುಮಗಳ ಮುಗ್ಧ ಮುಖದಲ್ಲಿ ಕಂಡುಬರುವ ಸ್ವಚ್ಛ ಸ್ಪಷ್ಟ ಸಂಪನ್ನ ಸಹಜ ಭಾವಗಳು ಅವಳ ನಿಷ್ಕಲ್ಮಷ ಶೀಲ ಚರಿತೆಗೆ ಗೌರವದ ಚಾಮರಗಳನ್ನು ಬೀಸುತ್ತಿದ್ದವು.

ಅವಳ ಪ್ರತಿಕ್ರಿಯೆ ಅಷ್ಟೇ ಸಹಜವಾಗಿತ್ತು. ಸಾತ್ವಿಕವಾಗಿತ್ತು. ಇಂತಹ ಮಕ್ಕಳನ್ನು ಅವರ ಪೂರ್ವಸ್ಥಿತಿಗೆ ಮುಟ್ಟಿಸುವದು ಎಷ್ಟು ಹಗು ರಾದುದೋ ಅಷ್ಟೇ ಕಠಿಣ, ನುರಿಯದ ನಿರೀಕ್ಷಕರಿಗೆ– ಪರೀಕ್ಷಕರಿಗೆ.

ಸಾಧುವು ಅವಳ ಸದ್ಭಾವನೆಗಳನ್ನು ಪಡೆದುಕೊಳ್ಳಲು, ಈ ನಿರೂಪಣೆ– ಅಲ್ಪಕಾಲದ ಆದರೂ ಮಹತ್ವದ– ನಿರೂಪಣೆ, ಬಹಳ ಸಹಾಯಕಾರಿಯಾ ಯಿತು– ಎಂಬುದನ್ನು ಅರಿತು ನಾವು ಬಹಳ ಉಲ್ಲಸಿತರಾದೆವು. ಆದರೆ ಅಧಿಕಾರಿಗಳ ಉಲ್ಲಾಸ ಅಂತರಂಗದ ಅನುಭವ ಮಾತ್ರ.

ನಾನು ಈಗ ರಂಗ ಸ್ಥಳವನ್ನು ಪ್ರವೇಶ ಮಾಡಲು ಯೋಗ್ಯ ಸಮಯ ವೆಂದು ಕಂಡುಕೊಂಡೆನು. ನಾನು ಮತ್ತೊಂದು ಸೂಚನಾತ್ಮಕವಾದ ಮಾತಿ ನಿಂದ ಸನ್ನಿವೇಶದಲ್ಲಿ ಪ್ರವೇಶಿಸಿದೆನು.

" ಓ ಸಾಧು ಮಹಾಶಯ ! ಇದೇನು. ಕೋಣನ ಬಂಡಿಯನ್ನು ನಾವು ಇಂದು ಮುಂಜಾನೆ ಹೂಡಿದಂತಿದೆ. ರಥ ಸಾಗಲಿ. ಬಿಸಿಲು ಏರಿದರೆ ಊಟದ ಸುಖ ಹೇಗೆ ಸಿಕ್ಕೀತು. ಇಬ್ಬರು ಸಹಾಯಕರನ್ನು ಮಕ್ಕಳಲ್ಲಿಯೇ ಹಿರಿಯರಾದ ಮೂವರು ನಾಲ್ವರು ಬಾಲಕರನ್ನು ಕರೆದುಕೊಂಡು ನೀವು ಮುಂದೆ ನಡೆಯಿರಿ. ಬೇಗ ಹೆಜ್ಜೆ ಹಾಕಿ ಹೋಗಿ ಮುಂದಿನ ವ್ಯವಸ್ಥೆ ಅಣಿ ಗೊಳಿಸಿರಿ. ನಾವು ಉಳಿದವರು ಸಾವಕಾಶವಾಗಿ ಬರುವೆವು. "

ಇಬ್ಬರು ಸಹಾಯಕರು ಬಂದು ಐವರು ಹಿರಿಯ ಬಾಲಕರನ್ನು ಆಯ್ಕೆ ಮಾಡಿಕೊಂಡು ಸಾಧುವಿನೊಂದಿಗೆ ಮುಂದೆ ಭರಭರನೆ ಸಾಗಿದರು.

ಮೀನವು ಗಾಳಕ್ಕೆ ಬಾಯಿಹಾಕಿತು. ಸುಂದರಾಳು ಬಂದು ಸಹೋ ದ್ಯೋಗಿನಿಗೆ ಪ್ರಶ್ನಿಸಿದಳು :

" ತಾಯಿ ! ನಾನು ಆ ಸಾಧುವಿನೊಂದಿಗೆ ಮಾತನಾಡಬೇಕೆಂದಿದ್ದೇನೆ. ತಾವು ಅಪ್ಪಣೆ ಕೊಡುವಿರೋ ? ನಾನು ಮಾತನಾಡುವದು ಸರಿಯಾದೀತೆ?"

ಸಹೋದ್ಯೋಗಿಸಿ ತುಟಿ ಬಿಚ್ಚಲಿಲ್ಲ. ನನ್ನ ಕಡೆಗೆ ಬೆರಳು ಮಾಡಿ ತೋರಿಸಿದಳು. "ಅವರು ಒಪ್ಪಿದರೆ ನೀನು ಮುಂದೆ ಹೆಜ್ಜೆ ಇಡಬಹುದು" ಎಂಬ ಭಾವವನ್ನು ಅವರು ವ್ಯಕ್ತಪಡಿಸಿದರು.

"ಎಲ್ಲರೂ ಗೋಕರ್ಣಕ್ಕೆ ಹೋದರೆ, ಗೋಕರ್ಣದವರು ಗಾಳಕ್ಕೆ ಹೋದರು" ಎಂಬ ನಾಣ್ಣುಡಿಯಿಲ್ಲವೆ? ನಮ್ಮ ಸಹೋದ್ಯೋಗಿಸಿ ವನ ಭೋಜನಕ್ಕೆ ಹೊರಟವರು. ಅವರು ಈ ಸಮಸ್ಯೆಗಳಿಂದ ತಮ್ಮ ವಿಹಾರದ ಸುಖಾನುಭವವನ್ನು ಭಂಗಪಡಿಸಿಕೊಳ್ಳಲು ಸಿದ್ಧರಿರಲಿಲ್ಲ. ಅತ್ಯಂತ ಧಾರ್ಮಿಕವಾಗಿ ಅವರು ಈ ವ್ರತವನ್ನು ಪಾಲಿಸುತ್ತಿದ್ದರು. ನಾನು ಇದನ್ನು ಅವರಿಗಾಗಿ ನಡೆಯಿಸಿಕೊಟ್ಟೆನು.

## [೨೨]

ನನಗೆ ಬಿಡದ ಗಂಟು ಈ ಮಕ್ಕಳ ಸಮಸ್ಯೆ. ಗೋಕರ್ಣಕ್ಕೆ ಹೋದರೂ ಗಾಳ ಹಾಕುವದಕ್ಕಾಗಿಯೇ.

ಅದರೆ ನಮ್ಮ ಗಾಳಕ್ಕೆ ಸಿಕ್ಕ ಮೀನು ನೀರಿಗೇ—ತನ್ನ ಸ್ಥಳಕ್ಕೇ ತಿರುಗಿ ಹೋಗಬೇಕು—ಹೋಗುವದೇ ನಮ್ಮ ಕಾರ್ಯದ ಉದ್ದೇಶ. ಓದುವ ಶಾಸ್ತ್ರ ಇಕ್ಕುವ ಗಾಳ ಒಂದೇ ತೆರನಾದುದು.

ನಾವು ಮೀನುಗಾರರು. ಮೀನು ಕೊಳಚೆ ನೀರಿನಲ್ಲಿದ್ದರೆ ಅದನ್ನು ತನ್ನ ಅನುಕೂಲ ಸಿಂಧುವಿಗೆ ಮುಟ್ಟಿಸುವ ಹೊಣೆ ಹೊತ್ತವರು. ನಾವು ಬಲೆ ಬೀಸುವದೇ ಆಗಲಿ, ಗಾಳ ಚೆಲ್ಲುವದೇ ಆಗಲಿ, ಈ ಲೋಕ—ವಿಪರೀತ ಕಾರ್ಯಕ್ಕಾಗಿಯೇ.

ನಮಗೆ ತಿಳಿದುಕೊಳ್ಳಬೇಕಾದ ವಿಷಯವನ್ನು ನಾವು ಸುಂದರಾಳ

ಮುಖಾಂತರ ಸಾಧುವಿನಿಂದ ತಿಳಿದುಕೊಳ್ಳುವ ಸುಸಮಯ ದೊರೆತರೆ ನಮಗೆ ಸಂತೋಷವಾಗಲಿಕ್ಕಿಲ್ಲವೆ ?

ಸುಂದರಾ ಸಾಧುವಿಗೆ ಕೇಳಬೇಕೆನ್ನುವ ಪ್ರಶ್ನೆಗಳನ್ನು ಅವಳು ವನದಲ್ಲಿ ಭೋಜನ ಮುಗಿದ ಮೇಲೆ ಕೇಳಬಹುದೆಂದು ತಿಳಿಸಿ ನಾನು ಮುಂದೆ ಸಾಗಿದೆನು. ಇಲ್ಲಿಗೆ ಸುಂದರಾಳ ಕುತೂಹಲವು ಮುಗಿದು ಅವಳು ಸಾವಕಾಶವಾಗಿ ತನ್ನಲ್ಲಿಯೇ ಹುದುಗಿಕೊಂಡಳು–

ಅವಳ ಮುಖದ ಮೇಲೆ, ಅವಳು ನಮ್ಮ ಮಧ್ಯದಲ್ಲಿರದೆ ಯಾವುದೋ ದೂರಿನ ಒಂದು ವಿಷಯದಲ್ಲಿ ತಲ್ಲೀನಳಾಗಿದ್ದುದು ಕಂಡುಬರುತ್ತಿತ್ತು. ಯಾಂತ್ರಿಕವಾಗಿ ಅವಳು ನಮ್ಮೊಡನೆ ಹೆಜ್ಜೆ ಹಾಕುತ್ತಿದ್ದಳು. ಮಕ್ಕಳ ಗುಂಪಿನಲ್ಲಿ ಯಾಂತ್ರಿಕತೆ ಅಸಹ್ಯವಾಗಿ ಅಸ್ವಾಭಾವಿಕವಾಗಿ ಕಾಣುತ್ತ ಅದು ಎಲ್ಲರು ಮೌನವಾಗಿ ಮುಂದೆ ಸಾಗುವಂತೆ ಮಾಡಹತ್ತಿತ್ತು.

ಸಹಾಯಕರನ್ನು ಕರೆದು ಬಾಲಿಕೆಯರಲ್ಲಿ ಇಬ್ಬರು ಮೂವರನ್ನು ಆರಿಸಿ, ಅವರು ಒಂದು ಒಳ್ಳೆಯ ಸಾಂಘಿಕ ಹಾಡೊಂದನ್ನು ಹಾಡಲು ಹಚ್ಚುವಂತೆ ಸೂಚಿಸಿದೆನು.

ಬಾಲಿಕೆಯರಲ್ಲಿ ಇಬ್ಬರು ಒಳ್ಳೆಯ ಕಂಠದಿಂದ ಒಂದು ಹಾಡನ್ನು ಸಾವಕಾಶವಾಗಿ ಎತ್ತಿಕೊಂಡರು. ಒಂದು ಪಲ್ಲವಿ ಮುಗಿಯಿತು. ಹಾಡು ಮುಂದುವರಿಯಿತು. ಉಳಿದವರು ಎಲ್ಲರೂ ದನಿಗೂಡಿದರು. ಗುಂಪು ಚೇತನದಿಂದ ಅರಳಿತು. ಸುಂದರಾಳು ಈ ಚೈತನ್ಯದಲ್ಲಿ ಪ್ರವೇಶಿಸಲು ಹಾಡು ಅರ್ಥಕ್ಕೆ ಬರಬೇಕಾಯಿತು. ಅರ್ಥದ ಮೇಲ್ಮೆಯನ್ನರಿತ ಸುಂದರಾಳು ಪ್ರಸನ್ನಳಾಗಿ ತಾನೂ ದನಿಗೂಡಿದಳು. ಅವಳ ಮುಖದ ಮೇಲೆ ಸ್ವಾಭಾವಿಕ ಸಾತ್ವಿಕ ಕಳೆ ಮೂಡಿ ಬಂದಿತು.

ಕಣ್ಣು ಮುಚ್ಚಿ ಕಣ್ಣು ತೆರೆಯುವದರಲ್ಲಿಯೇ ನಾವು ವನಸ್ಥಳವನ್ನು ಮುಟ್ಟಿದೆವು. ಅಲ್ಲಿ ಎಲ್ಲವೂ ಸಿದ್ಧವಾಗಿತ್ತು. ಮಕ್ಕಳನ್ನು ಜಲಾಶಯಕ್ಕೆ ಮುಖ ತೊಳೆದುಕೊಂಡು ಬರಲು ಕಳುಹಿಸಿದೆವು.

ಅರ್ಧ ಗಂಟೆಯಲ್ಲಿ ಎಲ್ಲರೂ ಊಟಕ್ಕೆ ಸಜ್ಜಾದೆವು. ಪ್ರಾರ್ಥನೆ ಆದ ಮೇಲೆ ಊಟ ಪ್ರಾರಂಭವಾಯಿತು.

ಸಾಧುಮಹಾಶಯ, ನಾಲ್ವರು ಹಿರಿಯ ಮಕ್ಕಳು, ಸಹಾಯಕರು ಮತ್ತು ನಮ್ಮ ಸಹೋದ್ಯೋಗಿಯೊಬ್ಬರು ಊಟದ ವ್ಯವಸ್ಥೆಗೆ ಅಣಿಯಾದರು.

ಗ್ರಾಮಜೀವನದ ಊಟೋಪಚಾರದ ವ್ಯವಸ್ಥೆ, ಅಡಿಗೆಯ ರುಚಿಕಟ್ಟು ಮತ್ತು ಭೋಜನ ವಸ್ತು ವೈವಿಧ್ಯಗಳನ್ನು ಕಂಡು ನಮ್ಮ ಸಹೋದ್ಯೋಗಿನಿ 'ಹೌಹಾರಿ'ದಳು. ಒಂದು ಗಂಟೆಗೆ ಮೇಲ್ಪಟ್ಟು ಕುಳಿತು ನಾವು ಊಟ ಮಾಡಿದೆವು. ನಮ್ಮ ಊಟ ಮುಗಿದ ಮೇಲೆ ನಮ್ಮ ಉಪಚಾರ ಮಾಡಿದವರ ಊಟದ ವ್ಯವಸ್ಥೆಯನ್ನು ಮಾಡಿಸಿ ನಾವು ಗಿಡದ ನೆರಳಿನಲ್ಲಿ ಹಾಸಿದ ಗುಡಾರ ತಲೆದಿಂಬುಗಳನ್ನು ಆಶ್ರಯಿಸಿದೆವು.

ಒಂದು ಗಂಟೆಯ ನಮ್ಮ ವಿಶ್ರಾಂತಿ ಮುಗಿಯುವಷ್ಟರಲ್ಲಿ ಉಳಿದವರೂ ಒಂದು ಕೂಡಿಕೊಂಡರು. ಅರ್ಧಘಂಟೆಯಷ್ಟು ಕಾಲ ಮಕ್ಕಳು ಪರಸ್ಪರರ ಊಟದ ಬಗೆಯನ್ನು 'ಎತ್ತಿ ಆಡಿಕೊಳ್ಳುತ್ತ' ವಿನೋದದಲ್ಲಿ ಹೊತ್ತು ಕಳೆದರು. ಸಾಧು ಮಹಾಶಯ ಉಂಡದ್ದು ಒಂದು ಪಾಲಾದರೆ ಅವನ ಗಡ್ಡ ಇನ್ನರ್ಧದಷ್ಟು ಹೆಚ್ಚು ರುಚಿನೋಡಿತೆಂದು ಮಕ್ಕಳು ಚೇಷ್ಟೆಮಾಡಿ ಮನದಣಿ ನಕ್ಕರು. ಅವನ ಗಡ್ಡದಲ್ಲಿ ಅಲ್ಲಲ್ಲಿ ಇಣಿಕಿ ಹಾಕುತ್ತಿದ್ದ ಅನ್ನದ ಅಗಳುಗಳು ಮಜ್ಜಿಗೆ ಮೊಸರಿನ ಬಿಳಿ ಕಣಗಳೂ ಈ ವಿನೋದಕ್ಕೆ ಕಾರಣವಾಗಿದ್ದವು. ಸಾಧು ಮಹಾಶಯನಿಗೆ ಹರಪ್ರಸಾದನು ಒಂದು ಕೈಗನ್ನಡಿಯನ್ನೊದಗಿಸಿದನು. ಕೈಗನ್ನಡಿ ನಮ್ಮ ಸಹೋದ್ಯೋಗಿನಿಯ ಚರ್ಮದ ಕೈಚೀಲದ್ದು.

ತನ್ನ ಅವಸ್ಥೆಯನ್ನು ಕಂಡ ಸಾಧು ಮಹಾಶಯ, ಹೇಳದೆ ಕೇಳದೆ, ಜಲಾಶಯಕ್ಕೆ ಓಡಿದ. ಅವನು ಮರಳಿ ಬಂದಾಗ ಅವನ ಗಡ್ಡ ಓರಣದಿಂದ ಮಿಂಚುತ್ತಿತ್ತು. ಕುಡಿಮೀಸೆ ಹುರಿಗೊಂಡು ಆತನ ಕಣ್ಣಾಲಿಗಳೊಡನೆ ಹೋರಾಡುತ್ತಿದ್ದವು.

ಬಾಲಿಕೆಯರು ತಮ್ಮ ತಮ್ಮೊಳಗೆ ಮೆಲುದನಿಯಲ್ಲಿ ಜನಪದ ಗೀತೆಯನ್ನು ಹಾಡಹತ್ತಿದರು. ಅವರ ಗುಂಪು ಒಂದು ಗಿಡದ ನೆರಳಿನಲ್ಲಿತ್ತು. ಬಾಲಕರ ಗುಂಪು ಮತ್ತೊಂದು ಗಿಡದಡಿಯಲ್ಲಿ ಬೇರೆ ಬೇರೆ ಆಟಪಾಟಗಳಲ್ಲಿ ಲೀನವಾಗಿತ್ತು.

ನಮ್ಮ ಸಹೋದ್ಯೋಗಿಗಳು ತಾವು ಹೊರಿಸಿ ತರಿಸಿದ 'ಕೇರಂ' ಆಟದಲ್ಲಿ ಒಂದಾದರು. ನಾನು ಅವರೊಂದಿಗೆ ಅರ್ಧ ಘಂಟೆ ಆಡಿ, ಇನ್ನೊಬ್ಬರಿಗೆ ಅವಕಾಶ ಕೊಟ್ಟು ನನ್ನ ಮುಖ್ಯ ಕಾರ್ಯದ ಕಡೆಗೆ ಮನಸ್ಸು ಹಾಕಿದೆನು.

ಮೆಲ್ಲನೆ ಬೇರೊಂದು ಕಡೆಗೆ ಹೋಗಿ ಸಹಾಯಕನನ್ನು ಕರೆದು, ಸದ್ದಿಲ್ಲದೆ ಸುಂದರಾ ಮತ್ತು ಸಾಧುವನ್ನು ಒಬ್ಬೊಬ್ಬರನ್ನಾಗಿ ನನ್ನ ಬಳಿ ಕರೆತರಲು ಹೇಳಿದೆನು. ಮೊದಲು ಸುಂದರಾಳು ಬಂದಳು. ಅವಳಿಗೆ ಸಾಧುವಿನೊಂದಿಗೆ ಮಾತನಾಡುವಾಗ ಯಾವ ಅಂಜಿಕೆ ಅಳುಕು ಇಲ್ಲದೆ ಧೈರ್ಯದಿಂದ ಮಾತನಾಡಬೇಕೆಂದು ಹೇಳಿದ್ದಲ್ಲದೆ, ವಿಶೇಷವಾಗಿ ಅವಳ ಊರಿನ ಅತಿ ಇತ್ತೀಚಿನ ವಾರ್ತೆಯನ್ನು ತಿಳಿದುಕೊಳ್ಳುವಂತೆ ಪೂರ್ವ ಸಿದ್ಧತೆಯನ್ನೂ ಮಾಡಿಕೊಟ್ಟೆನು.

ಸಾಧು ಬಂದನು. ಸಾಧುವಿಗೆ ಸುಂದರಾಳ ಇಚ್ಛೆಯನ್ನು ತಿಳಿಸಿ, ಈ ಬಾಲಿಕೆಯ ವಿಷಯದಲ್ಲಿ, ಅವನು ಯಾವ ಮುಚ್ಚುಮರೆಯಿಲ್ಲದೆ, ತನಗೆ ತಿಳಿದ ವಿಷಯಗಳೆಲ್ಲವನ್ನೂ ತಿಳಿಸಲು, ಅವನಿಗೆ ದೊರೆಯುವ ಕೊನೆಯ ಅವಕಾಶ ಇದೊಂದೇ ಎಂದು ತಿಳಿಸಿದೆನು. ಸಾಧು ಮಹಾಶಯ ಗಂಭೀರ ಮುಖಮುದ್ರೆಯಿಂದ, ತನಗೆ ತಿಳಿದುದೆಲ್ಲವನ್ನೂ ನನ್ನ ಮುಂದೆ ಇಡುವದಾಗಿ ಹೇಳಿದನು.

ಸುಂದರಾಳು ಸ್ವಚ್ಛ ಹಿಂದಿಯಲ್ಲಿ ಪ್ರಶ್ನೆ ಮಾಡಲು ಪ್ರಾರಂಭಿಸಿದಳು:
"ನಿಮ್ಮ ಊರು ಯಾವುದು ? "
ಸಾಧು ಉತ್ತರಿಸಿದನು :
"ಮಂದಿರ ! "

"ಯಾವ ಮಂದಿರ ? "

"ಕೋಟದ್ವಾರ ಮಂದಿರ ! "

" ಮಂದಿರ ಗ್ರಾಮದಲ್ಲಿ ನಿಮ್ಮ ಮನೆ ಎಲ್ಲಿ ? "

"ದೇವಾಲಯದ ಪೌಳಿಯಲ್ಲಿ ! "

"ನೀವು ಆಗ 'ಧನಪಾಲ' ಎಂಬ ಹೆಸರು ಎತ್ತಿ ಹೇಳಿದಿರಿ. ಆ 'ಧನಪಾಲ' ಯಾರು " ?

" ಅವರು ಮಂದಿರದ ಜಮೀನದಾರರು. ಅವರ ಮನೆ ಕೋಟದ್ವಾರದ ಹಾದಿಯಲ್ಲಿದೆ. ಅವರ ಪತ್ನಿಯ ಗ್ರಾಮ ನಮ್ಮ ಗ್ರಾಮಕ್ಕೆ ಅತಿ ಸಮೀಪ. ಆ ಗ್ರಾಮದ ಹೆಸರು "ನದಿಯಾ". ಆ ಗ್ರಾಮದ ಜಮೀನದಾರ "ಧರ್ಮಪಾಲ" ಅವರ ಮಗಳನ್ನೇ "ಧನಪಾಲರಿಗೆ" ಕೊಟ್ಟಿದೆ. ಆ ತಾಯಿಯ ಹೆಸರು ಉಮಾದೇವಿ ! " ಒಂದು ನಿಮಿಷ ಇಬ್ಬರೂ ಮಾತನಾಡಲಿಲ್ಲ. ಸುಂದರಾ ಮೌನವನ್ನು ಮುರಿದಳು : " ಧನಪಾಲಜಿ ಎಲ್ಲಿ ? ಈಗ ? "

" ಮಂದಿರ ಗ್ರಾಮದಲ್ಲಿದ್ದಾರೆ. "

" ಉಮಾ............? ? "

ಸುಂದರಾಳಿಗೆ ಮುಂದೆ ಮಾತನಾಡುವದಾಗಲಿಲ್ಲ. "ಮಾಯೀ ! " ಎಂದವಳೇ ನನ್ನನ್ನು ಬಿಗಿದಪ್ಪಿ ದುಃಖಿಸಹತ್ತಿದಳು. ಸಾಧುವನ್ನು ಬೇರೆಡೆ ಕರೆದೊಯ್ಯಲು ಹೇಳಿ, ಸಹೋದ್ಯೋಗಿನಿಯನ್ನು ಕರೆಯಿಸಿ, ಸುಂದರಾಳ ಸಾಂತ್ವನವನ್ನು ಅವರಿಗೊಪ್ಪಿಸಿ ಸಾಧುವಿನ ಕಡೆಗೆ ಹೋಗಿ ಮುಂದಿನ ವಿಚಾರಣೆಯನ್ನು ಪ್ರಾರಂಭಿಸಿದೆನು.

ಸುದೀರ್ಘ ಕಾಲ ನಡೆದ ಹಿಂದಿನ ವಾರದ ವಿಚಾರಣೆಯ ಸಮಯದಲ್ಲಿ ಸಾಧು ಮಹಾಶಯನನ್ನು ನ್ಯಾಯಾಧೀಶರು ಒಳಗೆ ಕರೆತರಲು ತಿಳಿಸಿದಾಗ ಸುಂದರಾ ಭಯದಿಂದ ನ್ಯಾಯಾಧೀಶರ ಮೊರೆ ಹೋದ ವಿಷಯದಲ್ಲಿ ನನಗೆ ಒಂದು ಸಂದೇಹವು ಬಂದಿತ್ತು. ನಾನು ಇಷ್ಟು ದಿನ ಪ್ರಯತ್ನಪಟ್ಟರೂ ಅದರ ವಿಷಯದಲ್ಲಿ ಸರಿಯಾದ ಪರಿಹಾರ ಸಹಜವಾಗಿ ಸ್ವಾಭಾವಿಕವಾಗಿ ದೊರೆತಿರಲಿಲ್ಲ. ಇಂದು ಸುಂದರಾ ತಾನೇ ಈ ಕಗ್ಗಂಟನ್ನು ಬಿಡಿಸಿದಳು. ಈ ಕವಡು ಗಂಟು, ನನ್ನ ಕಲ್ಪನೆಯಿಂದಲೇ ಹುಟ್ಟಿತೆಂಬುದು ನನಗೆ ಖಚಿತವಾ

ಯಿತು. ನಾನು ನೇರವಾಗಿ ಸುಂದರಾಳಿಗಾಗಲೀ ಸಾಧುವಿಗಾಗಲೀ ಪ್ರಶ್ನೆ ಮಾಡಿ ಈ ಪರಿಹಾರವನ್ನು ಪಡೆಯಲಿಲ್ಲ. ಸುಂದರಾ ಈ ಸಾಧುವನ್ನು ಒಮ್ಮೆಯೂ ತನ್ನ ಜೀವಮಾನದಲ್ಲಿ ಕಂಡಿರಲಿಲ್ಲ. ಸಾಧುವಾದರೂ ಪ್ರತ್ಯಕ್ಷ ಈ ಕನ್ಯೆಯ ಎದುರು ಬಂದಿರಲಿಲ್ಲ.

ಸುಂದರಾ–ಸಾಧು ಸಂವಾದದಲ್ಲಿ ನಾನು ಕಂಡುದುದೇನು ? ಇಬ್ಬರೂ ಅಪರಿಚಿತರು ; ಇಬ್ಬರಿಗೂ ದೇವತಾ ಸ್ವರೂಪದಲ್ಲಿರುವ ಉಮಾದೇವಿಯೇ ಈ ಎರಡೂ ಜೀವಗಳಿಗೆ ಈ ಸತ್ವ ಪರೀಕ್ಷೆಯಲ್ಲಿ ಪಾರಾಗಲು ಸೂತ್ರಧಾರಿಯಾಗಿ ನೆರವಾದಳು ; ಎಂಬ ಸತ್ಯಾಂಶಗಳು ಪ್ರಕಟವಾದುದು ನನಗೆ ಮುಂದಿನ ಹಾದಿಯನ್ನು ಕಂಡುಕೊಳ್ಳಲು ಸಹಾಯಕಾರಿಯಾಯಿತು.

## ೨೩

ಸಾಧುವಿಗೆ ನಾನು ಈಗ ಧೈರ್ಯದಿಂದ ವಿಚಾರಿಸಿದೆನು:

" ನಿಮ್ಮ ಹೆಸರು? "

" ಸಮರ್ಥ ! ನನ್ನ ಹೆಸರು. ನನ್ನೊಡನೆ ಏಕವಚನದಲ್ಲಿಯೇ ಮಾತನಾಡಿರಿ. ನನ್ನ ಪಶ್ಚಾತ್ತಾಪಕ್ಕೆ ಇದೇ ಸೂಕ್ತ ಶಿಕ್ಷೆ "

" ಸಮರ್ಥ ! ನಿನ್ನ ಪಶ್ಚಾತ್ತಾಪ, ನಿನಗೆ ಶಿಕ್ಷೆ, ಇವೆಲ್ಲವೂ ದೇವರ ಕಾರ್ಯ. ಕರ್ತವ್ಯ ನಮ್ಮ ಪಾಲಿನದು. ಕರ್ತವ್ಯ ಪರಾಯಣರಾಗಿ ನಾವು ನಿನ್ನಂತಹರೊಡನೆ ಸಂಭಾಷಣೆ ಸಂವಾದ ನಡೆಸುತ್ತೇವೆ. ಪ್ರಾಮಾಣಿಕ ಉತ್ತರ ನೀಡಿದರೆ, ನಾವು ಬಹಳ ಉಪಕೃತರು. "

" ಮಹಾಶಯ ! ನನ್ನ ತಂದೆಯ ಚರಣಸಾಕ್ಷಿಯಾಗಿ ನಾನು ಸತ್ಯವನ್ನೇ ನುಡಿಯುವೆನು. ಈ ನ್ಯಾಯಾಲಯದಲ್ಲಿ ಕಾಲಿಟ್ಟಂದಿನಿಂದ ಒಂದೂ ಹುಸಿ ಮಾತನ್ನು ಆಡಿಲ್ಲ. ಆದರೆ........!" ಎಂದು ಸಮರ್ಥ ಮಾತು ನಿಲ್ಲಿಸಿದ. ನನಗೆ ಕುತೂಹಲ ಕೆರಳಿತು.

" ಆದರೆ........! ಅಂದರೇನು ? ಮುಂದೆ ಹೇಳು " ಎಂದೆನು.

" ನ್ಯಾಯಾಲಯಕ್ಕೆ ನಾನೇಕೆ ಬಂದೆ ? ನನಗಾಗಿರುವ ಅನ್ಯಾಯ ಯಾವುದು ? ಎಂಬುದನ್ನು ತಾವಾಗಲೀ ನ್ಯಾಯಾಲಯುವಾಗಲೀ ಕೇಳಲೇ ಇಲ್ಲ. ಕೇಳಿದ್ದರೆ ನಾನು ನನ್ನ ಹುಸಿ ನುಡಿಗಳಿಗೆ ಕ್ಷಮೆ ಕೇಳುವ ಪ್ರಸಂಗ ದೊರೆತು, ತಮಗೆ ನನ್ನ ಅಂತರಂಗದಲ್ಲಿ ಇನ್ನರ್ಧ ಪಾಲನ್ನು ಆಕ್ರಮಿಸಿದ್ದ ಕಪ್ಪು ಛಾಯೆಯ ಪರಿಚಯವಾಗುತ್ತಿತ್ತು. ಅದೇಕೋ ತಾವು ಎಲ್ಲರೂ ನನ್ನ ಬಿಳಿ ಬೆಳಕನ್ನೇ ಕೇಳಿಕೊಂಡು ತೃಪ್ತರಾದಂತಿದೆ. "

" ಸಮರ್ಥ ! ನ್ಯಾಯಾಲಯವು ತನ್ನ ವಿಚಾರಣೆಯನ್ನೇ ಪ್ರಾರಂಭಿಸಿಲ್ಲ. ನಿನ್ನ ಹೇಳಿಕೆಯನ್ನೇ ಪೂರ್ಣ ಕೇಳಿಕೊಳ್ಳುವ ತಾಳ್ಮೆಯಲ್ಲಿಯೇ ತನ್ನ ಗೌರವವನ್ನು ನ್ಯಾಯಾಲಯವು ಪ್ರಕಟಪಡಿಸಿಲ್ಲವೇ?" ಎಂದು ನಾನು ಎದುರಿಸಿದಾಗ ತಪ್ಪಿತಸ್ಥನಂತೆ ನಿಂತು," ಅಹುದು! ಅಹುದು! ನಾನೇ ನನ್ನ ಹೇಳಿಕೆಯನ್ನು ಇನ್ನೂ ಮುಗಿಸಿಲ್ಲ. ಹಳೆಯ ಕತೆಯನ್ನೇ ಹೇಳಿದ್ದೇನೆ. ಅತಿ ಇತ್ತೀಚಿನ ಘಟನೆಗಳನ್ನು ವಿವರಿಸುವದಿದೆ ಎಂಬುದನ್ನು ಇಂದಿನ ಉನ್ಮಾದದಲ್ಲಿ ಮರೆತಿದ್ದೇನೆ. ಮನ್ನಿಸಿರಿ" ಎಂದನು, ಸಮರ್ಥ.

" ನ್ಯಾಯಾಲಯದ ಮುಂದೆ ಹೇಳಬೇಕಾದ ಮಾತುಗಳನ್ನು ಇಲ್ಲಿ ಹೇಳಿದರೆ ಯಾವ ಪ್ರಯೋಜನವಿಲ್ಲ. ಅಲ್ಲಿ ನೀನು ಏನು ಹೇಳಬಹುದೆಂದು ನಾವು ಮುನ್ನ ತರ್ಕದಿಂದ ಕಂಡುಕೊಂಡು, ನೀನು ನ್ಯಾಯಾಲಯದ ಎದುರು ಹೇಳಿದ ಮೇಲೆ ಹೋಲಿಸಿ, ನಮ್ಮ ಸಿದ್ಧಾಂತಗಳನ್ನು ಸರಿಪಡಿಸಿಕೊಳ್ಳುವ ಅವಶ್ಯಕತೆ ಇದೆಯೋ ಇಲ್ಲವೆಂಬುದನ್ನು ನಿರ್ಧರಿಸುತ್ತೇವೆ. ನೀನು ಪ್ರಬುದ್ಧ. ನಾವು ಬಾಲಕರ ನಿರೀಕ್ಷಕರು. ನಿನ್ನ ವಿಷಯ ನಮ್ಮ ಕಾರ್ಯವ್ಯಾಪ್ತಿಯಲ್ಲಿ ಬರುವದಿಲ್ಲ. ನ್ಯಾಯಾಲಯವು ಮಾತ್ರ ನಿನ್ನನ್ನು ಪ್ರಶ್ನಿಸಿ ನಿರ್ಣಯಿಸಬಹುದು. ನಿನ್ನ–ನಮ್ಮ ಸಂಬಂಧ ಮನುಷ್ಯ ಮನುಷ್ಯರ ಸಂಬಂಧ. ಮನುಷ್ಯರ ಬಾಳುವೆ ಸುಗಮಗೊಳಿಸಲು ಪರಸ್ಪರರನ್ನು ಅರಿತುಕೊಳ್ಳುವ ಹವಣಿಕೆ ನಮ್ಮದಾಗಬೇಕು. ನಮ್ಮ ವಶದಲ್ಲಿರುವ ಮಕ್ಕಳ ಬಾಳು ಹಸನಾಗಲು ನಿನ್ನಿಂದ ಏನಾದರೂ ನೆರವಾದಿತೋ ಎಂದು ಎದುರು ನೋಡುತ್ತಿದ್ದೇವೆ. ನಮ್ಮ ನಂಬಿಕೆ ಆಕಾಂಕ್ಷೆಗಳಿಗೆ ತಣ್ಣೀರನ್ನು ನೀನು ಎರಚಲಿಕ್ಕಿಲ್ಲವೆಂದೇ ನಾವು ಭಾವಿಸಿದ್ದೇವೆ. ಸರಿಯೇ ? "

"ಶಿವ ! ಶಿವ ! ಈ ಕ್ಷುಲ್ಲಕನನ್ನು ಎಷ್ಟೊಂದು ಭಾವಿಸಿ ಮಾತ ನಾಡುತ್ತಿದ್ದೀರಿ. ನೀವು ಮಾಡುವ ದೇವರ ಕಾರ್ಯದಲ್ಲಿ ನಾನು ಕರ್ಪೂರಾರತಿಯ ಸುಗಂಧವನ್ನು ದೂರದಿಂದಲೂ ಮೂಸಿ ಸ್ವೀಕರಿಸಲು ಅನರ್ಹನು. ಸುಂದರಾಳ ವಿಷಯದಲ್ಲಿ ನನ ಉದ್ದೇಶ ಪರಿಪೂರ್ಣವಾಗಿ ಪರಿಶುದ್ಧವಿತ್ತು. ಆದರೆ ಈ ಉದ್ದೇಶ ಸಾಧನೆಗೆ ನಾನು ಅನುಸರಿಸ ಬೇಕೆಂದಿದ್ದ ಹಾದಿ ಅನಿಷ್ಟವಾದದ್ದಿತ್ತು. ಬಾಲಕ ಹರಪ್ರಸಾದನ ಬಗೆಗೆ ನನ್ನಿಂದ ಅಕ್ಷಮ್ಯ ಪ್ರಮಾದವು ಘಟಿಸುವದಿತ್ತು. ನಮ್ಮ ಪೂರ್ವಜರ ಪುಣ್ಯ ನಿಮ್ಮಲ್ಲಿ ಮೂರ್ತಿವಂತವಾಗಿ ಸಾಕ್ಷಾತ್ಕರಿಸಿ ನನ್ನಿಂದ ಈ ಘೋರ ಅಪರಾಧವು ಘಟಿಸದಂತೆ ಕಾಪಾಡಿತು. ದೇವರು ಸರ್ವಾಂತರ್ಯಾಮಿ. ಸರ್ವಶಕ್ತ. ಮಾನವರು ಸರಳವಾಗಿರುವದನ್ನು ಅಜ್ಞಾನದಿಂದ ವಕ್ರ ತೊಡಕಿನಲ್ಲಿ ಸಿಲುಕಿಸುತ್ತಾರೆ. ದೇವರು ನಿರಾಯಾಸವಾಗಿ ತನ್ನ ನಿಯಮಾನುಸಾರ ಇದೆಲ್ಲವನ್ನೂ ಸರಳಗೊಳಿಸುತ್ತಾನೆ".

ಸಮರ್ಥನ ಮಾತುಗಳು ಈಗ ಪರಿಪೂರ್ಣ ಸತ್ಯದ ಸೀಮೆಯಲ್ಲಿ ಅಡಿಯಿರಿಸುತ್ತಿರುವದನ್ನು ಕಂಡು ನನಗೆ ಅತಿ ಆನಂದವಾಯಿತು. ನಾವು ಜಲಾಶಯಕ್ಕೆ ಬಂದು ಆಗಲೇ ಬಹಳ ಹೊತ್ತು ಆಗಿತ್ತು. ಸಮರ್ಥನೊಡನೆ ಸಂಭಾಷಣೆ ನಿಲ್ಲಿಸಿ ವಸತಿಗೃಹಕ್ಕೆ ಮಕ್ಕಳನ್ನು ಕರೆದೊಯ್ಯುವ ವ್ಯವಸ್ಥೆ ಮಾಡಲು ಸಹಾಯಕರಿಗೆ ತಿಳಿಸಿದೆನು. ಸಮರ್ಥನ ಮುಂದಿನ ವಿಚಾರಣೆ ಯನ್ನು ವಸತಿಗೃಹದಲ್ಲಿ ಸಂಜೆಗೆ ನಡೆಸುವದಾಗಿ ತಿಳಿಸಿದೆನು. ವನಭೋಜನಕ್ಕೆ ಬಂದ ಸಮೂಹವು ನಗರದ ಕಡೆಗೆ ಹೊರಟಿತು.

ಸಂಜೆಯ ವಿಚಾರಣೆಯು ಸಮರ್ಥನ ಸಾಮರ್ಥ್ಯವನ್ನು ಹೊರಗೆಡಹಿತು. ಈ ಹಳ್ಳಿಯ ಮುಕ್ಕ ಮುಕ್ಕಣ್ಣನ ಅಖಂಡ ಧೈರ್ಯವನ್ನು, ತನ್ನ ಹೊರ ಜಗತ್ತಿನ ಜೈತ್ರ ಯಾತ್ರೆಯಲ್ಲಿ ತುಂಬಿಕೊಂಡು ನಡೆದಿರುವದನ್ನು ಕಂಡೂ ನಾನಂತೂ ಮೆಚ್ಚಿಕೊಂಡಿದ್ದೇನೆ. ತಲೆದೂಗಿದ್ದೇನೆ.

ಸಮರ್ಥನಿಗೆ ಸುಂದರಾಳು ಈ ನ್ಯಾಯಾಲಯದ ವಶದಲ್ಲಿದ್ದುದು ಗೊತ್ತಿದ್ದರೂ ನ್ಯಾಯಾಲಯದೆದುರು ಈ ಪ್ರಕರಣಕ್ಕಾಗಿ ಬರುವ ಧೈರ್ಯ

ಶ್ರವನಿಗಿರಲಿಲ್ಲ. ನ್ಯಾಯಸ್ಥಾನದ ದೃಷ್ಟಿಯಲ್ಲಿ ತಾನು ಅಪರಾಧಿಯೆಂದು ಸುಂದರಾಳ ಹಿಂದಿನ ಮನೋಭೂಮಿಕೆಯಿಂದ ಸಿದ್ಧಾಂತವಾಗುವದು ಖಚಿತ ಎಂದು ಸಮರ್ಥ ತಿಳಿದಿದ್ದನು. ಅಂತೆಯೇ ಮುಂಬಯಿ ಅನಾಥಾಶ್ರಮದ ಸಂಚಾಲಕ, ಸಾಧುಮಹಾಜನರು ಇವರೆಲ್ಲರ ಒತ್ತಾಯಕ್ಕೆ ಕಟ್ಟು ಬಿದ್ದು ಹರಪ್ರಸಾದನ ಪ್ರಕರಣದಲ್ಲಿ ಹುಸಿ ಸಾಕ್ಷಿ ಹೇಳುವ ಉದ್ದೇಶದಿಂದ ನ್ಯಾಯಾಧೀಶರೆದುರು "ಅನ್ಯಾಯ! ಅನ್ಯಾಯ!" ಎಂದು ಸಮರ್ಥ ಬಡಬಡಿಸಿದ್ದನು. ಪ್ರತ್ಯಕ್ಷ ನ್ಯಾಯಸ್ಥಾನದಲ್ಲಿ ತಾನು ಪಡೆದ ಅನುಭವವೇ ಬೇರೆ. ಹರಪ್ರಸಾದನ ಪ್ರಕರಣದಿಂದ ದೇವರು ಸಮರ್ಥನನ್ನು ವಿಮುಖನನ್ನಾಗಿ ಮಾಡಿ ಸುಂದರಾಳ ಪ್ರಕರಣದಲ್ಲಿ ಇವನನ್ನು ಧುಮುಕಿಸುತ್ತಿರುವದನ್ನು ಅವನು ಕಂಡು ಶಿವಸಂಕಲ್ಪಕ್ಕೆ ಶರಣಾಗತನಾದನು.

ಮನುಷ್ಯರು ತಮ್ಮ ಎಣಿಕೆ ಅಥವಾ ಲೆಕ್ಕ ತಪ್ಪಿದರೆ ಕಕ್ಕಾವಿಕ್ಕಿಯಾಗುತ್ತಾರೆ. ಇದಾದ ಮೇಲೆ ಇದು ಎಂದು ಎಣಿಕೆ ಹಾಕಿ ಕಾರ್ಯ ಕೈಕೊಂಡಾಗ, ಈ ಕ್ರಮವು ತಪ್ಪಿದರೆ, ವಾಮಮಾರ್ಗದಿಂದ ತನ್ನದನ್ನು ಕೈಗೂಡಿಸಿಕೊಳ್ಳಬೇಕೆಂದಿರುವ ಈ "ಸ್ವಾರ್ಥಿ" ಜನರು ಭ್ರಮಿಷ್ಟರಾಗುತ್ತಾರೆ

Order of seqence (ಕ್ರಮಶಃ ಘಟನೆ) ಎನ್ನುವ ಮಾತು ಸ್ವಾರ್ಥಿಗಳನ್ನು ಅಧೀರರನ್ನಾಗಿ ಮಾಡಿ "ಅಘಟಿತ ಘಟನೆ" ಮತ್ತು "ಕರ್ಮ-ಧರ್ಮ-ಸಂಯೋಗ"ಗಳ ಅರ್ಥವನ್ನೇ ಗ್ರಹಿಸದಂತೆ ಕೈಕಾಲು ಬಿಡಿಸುವದು. ದೈವೀಶಾಸನವು ಇಂತಹ ಧರ್ಮಸಂಕಟದ ಕಾಲದಲ್ಲಿಯೇ ತನ್ನ ನಿರ್ಣಯದಿಂದ ಮಾನವರಿಗೆ ಅವರ ಅಲ್ಪತನವನ್ನೂ ಪರಮಾತ್ಮನು ಸರ್ವಶಕ್ತನೆಂಬುದನ್ನೂ ಎತ್ತಿ ಹೇಳುವದು.

ಸಾಧು ಸಮರ್ಥನು ಹರಪ್ರಸಾದನ ವಿಷಯದಲ್ಲಿ ತನ್ನ ಹಸ್ತಕ್ಷೇಪವನ್ನು ನಡೆಸಲು ಬಂದಿದ್ದನು. ಅವನಿಗೆ ಅನಿರೀಕ್ಷಿತವಾಗಿ ಸುಂದರಾಳ ಪ್ರಕರಣವು ಅಂಟಿತು. ಇಂತಹ ಸಮಯದಲ್ಲಿ ಮನುಷ್ಯನು ಪ್ರಾಣಿಮಾತ್ರ ಇರುವದರಿಂದ ಸಮರ್ಥನು ಅಂಜಿ ಋಜುಮಾರ್ಗವನ್ನೇ ಹಿಡಿಯಬೇಕಾಯಿತು. ಸತ್ಯ

ಶೋಧನೆಗಾಗಿ ತವಕಿಸುತ್ತಿದ್ದ ನಮಗೆ ಸಮರ್ಥನ ಪ್ರವೇಶವು ದೈವೀಲೀಲೆ ಯಂತಿತ್ತು.

ಇಂದು ಸಂಜೆಗೆ ಬರುವ ಪತ್ರವ್ಯವಹಾರದ ನಿರೀಕ್ಷಣೆಯಿಂದ ನಮಗೆ ಡೆಹರಿ-ಓನ್-ಸೋನ್ ಅಧಿಕಾರಿಗಳು ಮಾಡಬಹುದಾದ ಇನ್ನುಳಿದ ಮಾರ್ಗದರ್ಶನದ ಸ್ಪಷ್ಟ ಚಿತ್ರವು ದೊರೆಯುವದೆಂದು ನಾನು ಭಾವಿಸಿದ್ದೇನೆ ನ್ಯಾಯಾಲಯವು ನಮಗೆ ದಯಪಾಲಿಸಿದ ಸ್ವಲ್ಪ ಅವಧಿಯ ಕಾರಣದಿಂದ ನಾವು ತಂತಿಯ ಸಂದೇಶಗಳನ್ನೇ (Telegraphic messagcs) ಸಂಪೂರ್ಣ ಅವಲಂಬಿಸಿ, ವ್ಯವಹಾರ ಮಾಡಿದ್ದರಿಂದ ಈಗ ಬಂದಿರುವ ಇನ್ನು ಮುಂದೆ ಬರುವ ತಂತಿ ಸಂದೇಶಗಳು ಒಂದು ಹೊರೆಯಷ್ಟಾಗುವದರಿಂದ ನಾವು ಬಹಳ ತೀವ್ರತೆಯಿಂದ ಕಾರ್ಯತತ್ಪರರಾಗಬೇಕಾಯಿತು. ಅಲ್ಲವೆ?

೨೪

ಸಂಜೆಯ ಸಂಭಾಷಣದಿಂದ ಸಮರ್ಥನ ಕಾರ್ಯವು ಹೊರಗಿನ ಜಗತ್ತಿನಲ್ಲಿ ಇನ್ನು ಸ್ವಲ್ಪ ಪೂರೈಸುವದಿದೆ ಎಂದು ನನಗೆ ಮನವರಿಕೆಯಾಯಿತು. ಅದಕ್ಕೆ ನ್ಯಾಯಸ್ಥಾನದ ಅನುಮತಿಯನ್ನು ಕೇಳಬೇಕೆಂದು ಗೊತ್ತುಪಡಿಸಿಕೊಂಡೆನು. ಸಮರ್ಥನು ಮುಂಬಯಿಯ ಅನಾಥಾಶ್ರಮದ ಸಂಚಾಲಕರ ಮತ್ತು ಸಾಧು ಸಮೂಹದ "ಯೋಗಕ್ಷೇಮ" ವನ್ನು ತೆಗೆದುಕೊಂಡು, ಸುಂದರಾ ಮತ್ತು ಹರಪ್ರಸಾದರು ಮರಳಿ ಸ್ವಸ್ಥಳಗಳಿಗೆ ಸುಖರೂಪವಾಗಿ ಮುಟ್ಟಲು ಮಾರ್ಗವನ್ನು ಸುಗಮಗೊಳಿಸಬೇಕೆಂಬುದೇ ಸಮರ್ಥನ ಯೋಜನೆಯಾಗಿತ್ತು. ಇದರಂತೆ ಹೊಂದಿಸಿ, ಸಮರ್ಥನನ್ನು ನಾಳೆ ನ್ಯಾಯಾಧೀಶರಲ್ಲಿಗೆ ಕಳಿಸುವ ವ್ಯವಸ್ಥೆ ಮಾಡಲು ಸಹಾಯಕರಿಗೆ ಬರೆದು ಕೊಟ್ಟೆನು. ಆಗಲೇ ರಾತ್ರಿ ೯ ಗಂಟೆಯಾಗಿತ್ತು. ಮನೆಗೆ ಹೊರಡಲು ಸೈಕಲ್ಲು ಹೊರಗೆ ಇಡಲು ಹೇಳಿದೆನು.

ಆಗ....ಅಂಚೆಯವನು ಸುಧೀರ್ಘ ಸಮಾಚಾರದ ತಂತಿಯ ಸಂದೇಶವೊಂದನ್ನು ತಂದು ಮುಟ್ಟಿಸಿ ತೆರಳಿದನು. ಸಂದೇಶವು ನಮ್ಮ ಹೊಂದಿಕೆಯನ್ನು ನಿರರ್ಥಕಗೊಳಿಸಿತು:

("Please do not disturb the present atmosphere and conditions around the two children Sundara and Hara Prasad. Await next message tomorrow early morning. By order I.G.P. Dehri-on-Sone")

"ಸುಂದರಾ ಹರಪ್ರಸಾದರ ಸುತ್ತುಮುತ್ತಲಿನ ಪರಿಸ್ಥಿತಿಗಳನ್ನು ಈಗ ಕೆಡಡಬೇಡಿರಿ. ನಾಳೆ ನಸುಕಿನ ಸಂದೇಶವನ್ನು ನಿರೀಕ್ಷಿಸಿರಿ ಆಯ್. ಜಿ. ಪಿ. ಅವರ ಅಜ್ಞೆಯನ್ವಯ. ಡೆಹರಿ-ಓನ್-ಸೋನ್ ಬೀಡಾರ."

ಇದು ತಂತಿ ಸಂದೇಶದ ತಾತ್ಪರ್ಯ ಆ ರಾಜ್ಯದ ಅತಿ ಉಚ್ಚ ಪೋಲೀಸ ಅಧಿಕಾರಿಗಳು ಈ ಪ್ರಕರಣದಲ್ಲಿ ಕಣ್ಣಿರಿಸಿದ್ದಾರೆ. ನನಗೆ ಏಕಕಾಲಕ್ಕೆ ಎಂದಿಲ್ಲದ ಉತ್ಸಾಹ ಅಷ್ಟೇ ಎದೆಗುದಿ. ಈ ಸಂದೇಶದ ಸಮಾಚಾರವನ್ನು ಇನ್ನೊಬ್ಬರಿಗೆ ತಿಳಿಸದಂತಹ ಪ್ರಮೇಯ. ಪಿಟ್ಟೆನ್ನದೆ ತಂತಿ ಸಂದೇಶವನ್ನು ಜೊಕ್ಕಣಕ್ಕೆ ಸೇರಿಸಿ ಸೈಕಲ್ಲನ್ನು ಏರಿ ಮನೆಯತ್ತ ಸಾಗಿದೆನು.

ಡೆಹರಿ-ಓನ್-ಸೋನ್ ಬೀಡಾರದಿಂದ ಅತಿ ಉಚ್ಚ ಪೋಲೀಸ ಅಧಿಕಾರಿಗಳ ಆಜ್ಞಾ ಪತ್ರದೊಂದಿಗೆ ನಾನು ಮನೆಯನ್ನು ಮುಟ್ಟಿದಾಗ ಪಾರ್ಥನಂತೆ ಸಂದೇಹಿಯಾಗಿದ್ದೆನು. ಆಗ ಸಾರಥ್ಯಕ್ಕೆ ಇರುವ ನನ್ನ ಅಂತರಾತ್ಮಕ್ಕೆ ಶರಣು ಹೋದೆನು. ಅಲ್ಲಿಯೇ ನನಗೆ ಪರಿಹಾರವು ದೊರೆತುದಲ್ಲದೆ "ಉದ್ಧರೇತ್ ಆತ್ಮನಾ ಆತ್ಮಾನಂ" ಎಂಬ ದಿವ್ಯೋಕ್ತಿಯ ಬೆಳಕು ಕಂಡಿತು.

ಅಧಿಕಾರಿಯಾಗಿ ನಾನು ಮಾಡಿರುವ ಕರ್ತವ್ಯಗಳಲ್ಲಿ ಅಪ್ರಾಮಾಣಿಕತೆ ಇರಲಿಲ್ಲ. ಚ್ಯುತಿ ಇಲ್ಲ. ಮುಂದಿನ ಯೋಜನೆಗಳು ಹೀಗೆಯೇ ನಡೆಯಬೇಕು. ಇಷ್ಟೆ ಪ್ರಮಾಣದಲ್ಲಿ ಪರಿಣಾಮ ದೊರೆಯಬೇಕು. ಎಂಬ ಫಲಾಪೇಕ್ಷೆಯ ಯಾವ ಅಧಿಕಾರವೂ ಇಂದಿನ ಅಂತಸ್ತಿನಲ್ಲಿರುವ ಮಾನವರಿಗಿಲ್ಲ. ಪ್ರಯತ್ನದ

ಕೊನೆಗೆ ಪರಮೇಶ್ವರ. ಪ್ರಯತ್ನಾಂಶೀ ಪರಮೇಶ್ವರಃ! ಬಹಳ ಸೊಗಸಾದ ಸಿದ್ಧಾಂತ. ದೇವರ ಲೆಕ್ಕಾಚಾರದಲ್ಲಿ ಯಾರು ಯಾರು ಯಾವ ಕಾಲದಲ್ಲಿ ಯಾವ ರೀತಿಯ ಪಾತ್ರಗಳನ್ನು ನಿರ್ವಹಿಸಬೇಕೆಂಬುದು ಕಾಲಾನುಸಾರವಾಗಿ ಅವರವರಿಗೆ ತಿಳಿದು ಬರುವದು. ಅದರಂತೆ ಅವರು ಪಾತ್ರ ಧರಿಸುವರು.

ಅಧಿಕಾರಿಯಾದ ನನ್ನೆದುರಿಗೆ ಮೊದಲು ಮೊದಲಿಗೆ ಹರಪ್ರಸಾದ ಒಬ್ಬನೇ ಬಂದನು. ಅದೂ ಅವನು ನನಗೆ ದೃಗ್ಗೋಚರವಾಗಿದ್ದುದು ಆಗ ಬಾಹ್ಯಸ್ವರೂಪದಲ್ಲಿ ಮಾತ್ರ. ಆತನ ಅಂತರಂಗದ ದರ್ಶನದಿಂದ ನನಗೆ ಹರ ಪ್ರಸಾದನ ಪರಿಪೂರ್ಣ ವ್ಯಕ್ತಿತ್ವವು ಅನಂತರ ಸ್ಪಷ್ಟವಾಯಿತು. ಸಾಧುವಿನ ಪಾತ್ರ ಪ್ರವೇಶದಿಂದ ಸುಂದರಾಳ ಬಾಳಿನ ಕೆಲವು ಚಿತ್ರಗಳು ತದನಂತರ ನನಗೆ ಕಂಗೊಳಿಸಿದವು. ಸುಂದರಾಳ ಸಮಸ್ಯೆಯ ಅಭ್ಯಾಸ ಮಾಡುವಾಗ ಸಾಧು ಸಮರ್ಥನ ಬಾಳಿನ ಕೆಲವು ಮುಖಗಳು ಅನಾಯಾಸವಾಗಿ ನನಗೆ ಪರಿಚಯ ವಾದವು. ಈ ಎಲ್ಲ ಪರಿಚಯ ಅಭ್ಯಾಸಗಳಲ್ಲಿ ನನಗೆ ಒಂದು ಶಾಶ್ವತ ಹರಿಗಡಿ ಯದ ಎಲ್ಲಿಯೂ ಹಾದಿಯನ್ನು ತಪ್ಪದ ಮತ್ತು ತಪ್ಪಿಸದ, ಅತಿಮಾನವತೆಯ ಆಚೆಗಿನ ದಿವ್ಯಸೂತ್ರದ ಮಾರ್ಗದರ್ಶನವು ಲೀಲೆಯಿಂದ ತನ್ನ ಸಂಕಲ್ಪವನ್ನು ಈಡೇರಿಸಿಕೊಳ್ಳುತ್ತಿರುವದನ್ನು ಕಂಡು, ಆ ಅಧಿದೈವತದ ವಿರಾಡ್ರೂಪದ ಒಂದಂಶದ ಅನುಭವದಿಂದ ನಾನು ಅತ್ಯಂತ ನಮ್ರನಾದೆನು.

ಹರಪ್ರಸಾದ ಮತ್ತು ಸುಂದರಾ ಇವರ ಬಾಳಿನ ತೊಡಕನ್ನು ಬಿಡಿಸುವ ಅದ್ವಿತೀಯ ದೈವೀ ಶಕ್ತಿಯೊಂದು ಈ ಹಸುಮಕ್ಕಳ ಆ ಸಾಧುಸಂತರ, ಎರಡೂ ಕಡೆಯ ಅಧಿಕಾರಿಗಳ ಮುಖಾಂತರತ್ರಿಪಥದ ಮಹಾಯೋಗವನ್ನು ಪೂರ್ಣಗೊಳಿಸುತ್ತಿದೆ ಎಂದು ಸಾಕ್ಷಾತ್ಕಾರ ಮಾಡಿಕೊಂಡ ನನಗೆ ಮುಂದಿನ ಆಗು-ಹೋಗುಗಳ ಬಗೆಗೆ ಪರಿಣಾಮದ ಬಗೆಗೆ ಭಯ-ಭೀತಿ ಎನ್ನುವದೇ ಉಳಿಯಲಿಲ್ಲ.

ಡೆಹರಿ-ಓನ್-ಸೋನ್ ಅಧಿಕಾರಿಗಳ ಪತ್ರವು ದೈವೀ ಲೀಲೆಯ ಚಟು ವಟಿಕೆಗಳು ದಕ್ಷಿಣ ದೇಶದ ನಮ್ಮ ನಗರದಿಂದ ಉತ್ತರ ದೇಶದ ಡೆಹರಿ-ಓನ್- ಸೋನ್ ದತ್ತ ಕೇಂದ್ರೀಕೃತವಾಗುತ್ತ ಬಹುಶಃ ದೇವರು ಅಲ್ಲಿಯೇ ತನ್ನ ಲೆಕ್ಕ

ವನ್ನು ಬಿಡಿಸುವನೆಂಬುದನ್ನು ನನಗೆ ಖಚಿತಪಡಿಸಿತು. ನಾವು ಇನ್ನು ಮುಂದೆ ವಹಿಸುವ ಪಾತ್ರ ಕೇವಲ ಪೋಷಕಪಾತ್ರ ಎಂಬುದೂ ನನಗೆ ಮನಸ್ಸಿಗೆ ಖಾತ್ರಿಯಾಯಿತು. ದೇವರು ಕೆಲವರಿಂದ ಕೆಲವು ಪಾತ್ರಗಳನ್ನಾಡಿಸಿ, ಅವರು ಹಿಂದೆಯೇ ಮಾಡಬಹುದಾಗಿದ್ದ ಕರ್ತವ್ಯಗಳನ್ನು ಈಗ ಅವರಿಂದ ಮಾಡಿಸಿ ಅವರ ಬಾಳನ್ನು ಸಾರ್ಥಕಗೊಳಿಸುವನೆಂಬುದೂ ನನಗೆ ಮನವರಿಕೆಯಾಯಿತು.

ಈ ಒಂದು ನಿರೀಕ್ಷಣೆಯಲ್ಲಿಯೇ ಮರುದಿನ ನಾನು ನಿರೀಕ್ಷಣಾಲಯಕ್ಕೆ ಮುಂಜಾನೆ ಬಂದೆನು. ಡೆಹರಿ-ಓನ್-ಸೋನ್ ಸಂದೇಶ ಇನ್ನೂ ಬಂದಿರಲಿಲ್ಲ. ನಾಳೆಯೇ ನಡೆಯಲಿರುವ ನ್ಯಾಯಾಲಯದ ಪ್ರಕರಣಗಳಲ್ಲಿ ಈ ಇಬ್ಬರು ಮಕ್ಕಳಿಗೆ ವಿಶೇಷ ಪ್ರಾಧಾನ್ಯತೆಯು ಇರುವದರಿಂದ, ನಾನು ಈ ಪ್ರಕರಣಗಳಿಗೆ ಕೊನೆಯ ಒಪ್ಪವನ್ನು ಕೊಟ್ಟು ಅಣಿಗೊಳಿಸಲು ಸಿದ್ಧನಾದೆನು. ನನ್ನ ದೃಷ್ಟಿಯಿಂದ ನ್ಯಾಯಾಲಯವು ಹೇಗೆ ನಿರ್ಣಯ ಕೊಟ್ಟರೆ ಸಾಧುವಾದೀತೆಂದು ನಾನು ನ್ಯಾಯಾಲಯಕ್ಕೆ ಅಭಿಪ್ರಾಯವನ್ನು ಒಪ್ಪಿಸಲೇಬೇಕು. ಡೆಹರಿ-ಓನ್-ಸೋನ್ ತಂತಿ ಸಂದೇಶವನ್ನು ದೃಷ್ಟಿಯಲ್ಲಿರಿಸಿಕೊಂಡು ನನ್ನ ಮನಸ್ಸಿನೊಳಗೇ ನಾನು ಅಭಿಪ್ರಾಯವನ್ನು ಗುಣಿಸಿಕೊಳ್ಳಲು ಪ್ರಾರಂಭಿಸಿ ಧ್ಯಾನಾಸಕ್ತನಾದೆನು

ಸಾಧು ಸಮರ್ಥನನ್ನು ಮುಂಬೈಯ ಅನಾಥಾಶ್ರಮದ ಮತ್ತು ಸಾಧುಸಂತರ ತಂಡದ ಜಾಲದಿಂದ ಯಾವ ದ್ವೇಷ ವಿರಸವಿಲ್ಲದಂತೆ ಮುಕ್ತನನ್ನಾಗಿ ಮಾಡುವ ಅತ್ಯವಶ್ಯವಾದ ಕಾರ್ಯವೊಂದನ್ನು ಪೂರ್ಣಗೊಳಿಸಿದ್ದರೆ ಈ ಇಬ್ಬರೂ ಮಕ್ಕಳನ್ನು ಸುಸೂತ್ರವಾಗಿ ಅವರವರ ವಾಸಸ್ಥಳಗಳಿಗೆ ಮುಟ್ಟಿಸುವದು ಬಹಳ ಸರಳವಾಗಿತ್ತು. ಆದರೆ ಡೆಹರಿಯ ಅಧಿಕಾರಿಗಳ ದಿಗ್ಬಂಧನದಿಂದ ಇಲ್ಲಿ ನಾವು ಎಲ್ಲ ಕ್ರಿಯೆಗಳಿಗೂ ತಡೆಹಾಕಿದೆವು. ನಿರೀಕ್ಷಣಾಲಯಕ್ಕೆ ನಾನು ಬಂದ ಕೂಡಲೇ ನಿನ್ನೆ ಹೇಳಿದಂತೆ ಸಹಾಯಕನು ಸಾಧು ಸಮರ್ಥನೊಂದಿಗೆ ನ್ಯಾಯಾಧೀಶರಲ್ಲಿಗೆ ಹೋಗುವದನ್ನು ನೆನಪು ಮಾಡಿದನು. "ಅದರ ಅವಶ್ಯಕತೆ ಇಲ್ಲ; ಆ ಕಾರ್ಯ ಬೇರೊಂದು ರೀತಿಯಲ್ಲಿ ಇತ್ಯರ್ಥಗೊಂಡಿದೆ" ಎಂದು ನಾನು ಹೇಳಿದಾಗ ಸಹಾಯಕ ಮತ್ತು ಸಮರ್ಥ ಇಬ್ಬರೂ ವಿವರಗಳನ್ನು

ತಿಳಿದುಕೊಳ್ಳಲು ಆತುರರಾದರು. ನನ್ನ ಮೌನದಿಂದ ಅವರು ಅಲ್ಲಿಗೇ ಸುಮ್ಮ ನಾದರು ಅವರಿಗೆ ನಾನು ಸಮಾಧಾನಪಡಿಸಿದರೂ ನನಗೆ ಸಮಾಧಾನವು ಇನ್ನೂ ಸಿಗಲಿಲ್ಲ. ಧ್ಯಾನವು ಪುನಃ ಎರಡೂ ಪ್ರಕರಣಗಳನ್ನು ಮೆಲುಕು ಹಾಕಿ ತನ್ನ ತರ್ಕ, ನಿಯಮ, ನಿರ್ಣಯ, ಸಿದ್ಧಾಂತಗಳಿಗೆ ನಿರ್ಧಾರದಿಂದ ಅಂಟಿ ಕೊಳ್ಳಲು ಉತ್ಸುಕವಾಯಿತು. ಸಂಪೂರ್ಣವಾಗಿ ನಾನು ಧ್ಯಾನಕ್ಕೆ ಅಧೀನ ನಾದೆನು.

ನನ್ನ ಸಿದ್ಧಾಂತದಂತೆ ನ್ಯಾಯಾಲಯವೇ ಪ್ರತ್ಯಕ್ಷವಾಗಿ ಪೋಲೀಸ ಅಧಿಕಾರಿಗಳಿಗೆ ಆಜ್ಞಾರೂಪವಾಗಿ ಸೂಚನೆಗಳನ್ನಿತ್ತು ಮುಂಬಯಿಯ ಅನಾ ಥಾಶ್ರಮದ ಕಪಟ ಸಮಾಜೋದ್ಧಾರಕರನ್ನೂ ಕಪಟ ಸಾಧುಸಂತರ ತಂಡ ವನ್ನೂ ಸಾರ್ವಜನಿಕವಾಗಿ ಧ್ವಂಸಗೊಳಿಸಬೇಕು. ಆ ಕ್ರಿಯೆಯೊಂದಿಗೆ ಈ ಮಕ್ಕಳು ಮತ್ತು ಸಾಧು ಸಮರ್ಥರು ತಮ್ಮ ತಮ್ಮ ಊರುಗಳಿಗೆ ಮುಟ್ಟು ವಂತೆ ಸೌಕರ್ಯವನ್ನೂ ನ್ಯಾಯಾಲಯವು ಅಧಿಕಾರಿಗಳ ಮುಖಾಂತರ ಏರ್ಪ ಡಿಸುವದೂ ನಡೆಯಬೇಕು. ಡೆಹರಿ-ಓನ್-ಸೋನ್ ಅಧಿಕಾರಿಗಳು ಈ ಮೂವರು ಅವರವರ ವಾಸಸ್ಥಳಗಳಲ್ಲಿ ನೆಮ್ಮದಿಯಿಂದ ನೆಲೆಗೊಳ್ಳುವಂತೆ ಕ್ರಮ ತೆಗೆದುಕೊಳ್ಳಬೇಕು. ಈ ಸಿದ್ಧಾಂತವನ್ನು ನನ್ನ ಅಭಿಪ್ರಾಯವೆಂದು ನಾನು ಅತ್ಯಂತ ಶ್ರದ್ಧೆಯಿಂದ, ಉತ್ಸಾಹದಿಂದ ಹರಪ್ರಸಾದ ಮತ್ತು ಸುಂದರಾ ಅವರ ಪ್ರಕರಣಗಳಲ್ಲಿ ಬರೆದು ಮುಗಿಸಿದೆನು.

## ೨೫

ಎರಡೂ ಪ್ರಕರಣಗಳ ಕಾಗದ ಪತ್ರಗಳನ್ನು ಕಟ್ಟಿ ಕಪಾಟಿನಲ್ಲಿಡಲು ಹೇಳಿದೆನು. ನಮ್ಮ ಸಹೋದ್ಯೋಗಿಯಾದ ಅಧಿಕಾರಿಣಿಯನ್ನೂ ಸಹಾಯಕ ವರ್ಗವನ್ನೂ ಕರೆಯಿಸಿ ಹರಪ್ರಸಾದ ಮತ್ತು ಸುಂದರಾ ಅವರ ಅರಿವೆ ಅಂಚಡಿ ಉಡಿಗೆತೊಡಿಗೆ, ಹಾಸಿಗೆ ಇನ್ನಿತರ ಅವರ ವಸ್ತುಗಳನ್ನು ಜತನದಿಂದ ಸಿದ್ಧಪ ಡಿಸುವ ಅವಶ್ಯಕತೆಯನ್ನೂ ರೀತಿಯನ್ನೂ ತಿಳಿಸಿದೆನು. ಆ ಮಕ್ಕಳು ಮಾಡ ಬೇಕಾಗಿರುವ ಪ್ರವಾಸದ ಅವಧಿ, ಅವರ ಮಧ್ಯಂತರದ ವಸತಿಗಳು, ಇದೆಲ್ಲ

ದಕ್ಕೂ ಬೇಕಾಗುವ ದಾರಿ ಬುತ್ತಿ, ವೆಚ್ಚ ಮತ್ತಿತರ ಪಡಿಪದಾರ್ಥಗಳ ವಿವರ ಗಳನ್ನೂ ನಾವಿಬ್ಬರೂ ಅಧಿಕಾರಿಗಳೂ ಸಹಾಯಕ ವರ್ಗದವರೂ ಸಿದ್ಧಪಡಿಸಿ ದೆವು. ಈ ಸಿದ್ಧತೆಯಿಂದ ಏಕಾಏಕೀ ನಿರೀಕ್ಷಣಾಲಯದಲ್ಲಿ ಗಂಭೀರ ವಾತಾವ ರಣವು ಹುಟ್ಟಿಕೊಂಡಿತು. ಈ ಎರಡೂ ಮಕ್ಕಳು ತಮ್ಮ ಜಟಿಲ ಪ್ರಕರಣಗ ಳಿಂದ ನಮ್ಮೆಲ್ಲರ ಹೃದಯಗಳನ್ನೇ ಸೂರೆ ಹೊಡೆದಿದ್ದುದನ್ನು ನಾವು ಆಗ ಅನುಭವಿಸಿ ಒಬ್ಬರನ್ನೊಬ್ಬರು ಏನೋ ಕಳೆದುಕೊಳ್ಳುತ್ತಿರುವವರಂತೆ ಹುಳು ಹುಳು ಮಾತಿಲ್ಲದ ಮರುಕದಿಂದ ನೋಡಿದೆವು.

ಕರ್ತವ್ಯ ಪರಿಪಾಲನೆಯ ಅರಿವು ಒಂದಿಲ್ಲದಿದ್ದರೆ, ಬಹುಶಃ ಮನುಷ್ಯ ತನ್ನ ಭೌತಿಕ ದೇಹವನ್ನು ಇಂತಹ ಪ್ರಸಂಗಗಳಲ್ಲಿ ಕರಗಿಸಿಕೊಂಡು ನೀರಾಗಿ ಬಿಡುತ್ತಿದ್ದನೇನೋ ಎಂದು ನಾನು ಆಗ ಅನುಭವಿಸಿದೆನು. ಆಗ ವೇದಾಂತ ದತ್ತ ನನ್ನ ಚಿತ್ತವು ಸಾಗಿತು. ನೀರೇ ದೇವರು ಎಂಬ ಒಂದು ಮಾತು ವೇದಾಂತದಲ್ಲಿ ಬಂದಿರುವದರ ಔಚಿತ್ಯ, ಅಲ್ಲಿ ಉಕ್ತವಾಗಿರುವ ನೀರಿನ ಸತ್ಯ ರೂಪ ಇವುಗಳಲ್ಲಿ ನಾನು ತಲ್ಲೀನನಾಗಿದ್ದೆನು. ಸಹೋದ್ಯೋಗಿನಿಯು ಗಟ್ಟಿ ಯಾದ ಹುಸಿ ಕೆಮ್ಮಿನಿಂದ ನನ್ನನ್ನು ವಾಸ್ತವ ಜಗತ್ತಿಗೆ ಕರೆತಂದಳು.

ನಾನಿನ್ನೂ ವಾಸ್ತವ ಲೋಕಕ್ಕೆ ಪೂರ್ಣ ಮುಟ್ಟಿರಲಿಲ್ಲ. ಅಂಚೆಯ ವನು ದೇವದೂತನಂತೆ ತಂತಿ ಸಂದೇಶದೊಂದಿಗೆ ಕಾರ್ಯಾಲಯದಲ್ಲಿ ಬಂದಿಳಿ ದನು. ನಿರೀಕ್ಷಣೆಯಂತೆ ಅದು ಇಂದು ಮುಂಜಾನೆ ಬರಬೇಕಾಗಿದ್ದ ಡೆಹರಿ-ಓನ್-ಸೋನ್ ಆಯ್. ಜಿ. ಪಿ. ಅವರ ತಂತಿ ಸಂದೇಶವಾಗಿತ್ತು. ಕೆಲವೇ ಚಿಕ್ಕ ಮಾತುಗಳಲ್ಲಿ ಮುಂದಿನ ಮಾರ್ಗವನ್ನು ಸರಳವಾಗಿ ಸ್ಪಷ್ಟಪಡಿಸಿದ್ದರು.

(Hara Prasad Sundara Respective Father Brother Joint wild super human attack with adequate police aid blasted wieked anti social Bombay Orphanage management sadhu net-work spread northsouth. Achieved reconeiliationSundara group miraculously. Hara Prasad Father won back

from death-bed giving news traced lost son. Both advised rest hospital admitted strain long struggle anti-social elements. Sent full detailed narration-separate post. Request children's court order release repatriation inspite long distance government cost. Helpful concerned officer accompany children rehabilitation. Intricate cases, solved-Divine grace.

By order I. G. P. Dehri-On-Sone camp.)

"ಹರಪ್ರಸಾದ ಸುಂದರಾ ಅವರ ಸಂಬಂಧಪಟ್ಟ ತಂದೆ ಮತ್ತು ಅಣ್ಣಂದಿರು ಅತಿಮಾನವ ದೈತ್ಯ ಸಾಹಸದಿಂದ ಮುಂಬಯಿಯ ಅನಾಥಾಶ್ರಮದ ದುಷ್ಟ ವ್ಯವಸ್ಥಾಪಕ ವರ್ಗದ ಮೇಲೂ ದಕ್ಷಿಣೋತ್ತರ ಹಬ್ಬಿದ ಸಾಧು ಜನರ ತಂಡದ ಮೇಲೂ ಯೋಗ್ಯ ಪೋಲೀಸಪಡೆಯ ನೆರವಿನಿಂದ ಎರಗಿ ದುಷ್ಟರನ್ನೆಲ್ಲ ಧ್ವಂಸ ಮಾಡಿದ್ದಾರೆ. ಸುಂದರಾಳ ಆಪ್ತವರ್ಗದಲ್ಲಿ ಉಪಶಮನದಿಂದ ಒಂದು ಪವಾಡವನ್ನೇ ಮಾಡಲಾಗಿದೆ. ಹರಪ್ರಸಾದನು ಬದುಕಿರುವ ಸುದ್ದಿಯನ್ನು ಕೇಳಿ ಆವನ ತಂದೆ ಮರಣದ ಹಾಸಿಗೆಯಿಂದ ಪುಟಿದೆದ್ದು ದುಷ್ಟರ ವಿರುದ್ಧ ಹೋರಾಡಿದನು. ಇಬ್ಬರೂ ಈಗ ಡೆಹರಿ-ಓನ್-ಸೋನ್ ಆರೋಗ್ಯಧಾಮದಲ್ಲಿ ವೈದ್ಯರ ಒತ್ತಾಯದಿಂದ ವಿಶ್ರಾಂತಿಯನ್ನು ಪಡೆಯುತ್ತಿದ್ದಾರೆ. ಈ ವಿಷಯದಲ್ಲಿ ವಿಸ್ತಾರದ ವರ್ಣನೆಯನ್ನು ಪ್ರತ್ಯೇಕ ಅಂಚೆಯಿಂದ ಕಳಿಸಲಾಗಿದೆ. ನ್ಯಾಯಾಧೀಶರಿಗೆ ನಮ್ಮ ವಿಜ್ಞಾಪನೆಯನ್ನು ತಿಳಿಸಿರಿ. ಇಬ್ಬರೂ ಮಕ್ಕಳನ್ನು ಬಿಡುಗಡೆ ಮಾಡಿ ನ್ಯಾಯಾಲಯದ ವೆಚ್ಚದಿಂದ ಇಲ್ಲಿಗೆ ಮರಳಿ ಕಳಿಸಬೇಕು. ಪ್ರವಾಸವು ದೀರ್ಘವಿದ್ದರೂ ದಯಾಪರ ನ್ಯಾಯಾಧೀಶರು ಇದೊಂದು ವಿಶೇಷ ಆಜ್ಞೆಯನ್ನು ಮಾಡಬೇಕು. ಈ ಮಕ್ಕಳು ಇಲ್ಲಿ ಪುನಃ ನೆಲೆಗೊಳ್ಳುವದಕ್ಕೆ ಸಂಬಂಧಿಸಿದ ಅಧಿಕಾರಿ ಮಕ್ಕಳೊಂದಿಗೆ ಇತ್ತ ಬಂದು ಅವರನ್ನು ಮುಟ್ಟಿಸಿ ಹೋಗಬೇಕು. ದೇವರ ದಯೆಯಿಂದ ಈ ಜಟಿಲ ಪ್ರಕರ

ಣಗಳು ಸರಳವಾಗಿ ಬಗೆಹರಿದವು. ಆಯ್. ಜಿ. ಪಿ. ಆಜ್ಞೆಯನ್ವಯ ಡೆಹರಿ-ಓನ್-ಸ್ಟೋನ್ ಬೀಡಾರ."

ನಾವು ಹುಡುಕುತ್ತಿದ್ದ ಸೋಮರಸದ ಬಳ್ಳಿಯು ನಮ್ಮ ಮುಂಗೈಗಳಿಗೆ ಸುತ್ತಿಕೊಂಡಂತಾಯಿತು.

ಈ ಸಂದೇಶವು ದೈವೀ ಲೀಲೆಯಲ್ಲಿ ಸಂದೇಹವುಳ್ಳವರೆಲ್ಲರನ್ನು ದೇವರಲ್ಲಿ ಶ್ರದ್ಧೆ ವಿಶ್ವಾಸವನ್ನಿಡುವಂತೆ ಸಹಜವಾಗಿ ಪ್ರೇರಣೆ ನೀಡುವದು. ನನ್ನಲ್ಲಿ ಈಗಾಗಲೇ ಖಚಿತಗೊಂಡ ಈ ಶ್ರದ್ಧೆಯು ಇಮ್ಮಡಿಗೊಂಡಿತು. ಕಾಲಾಯ ತಸ್ಮೈಯನಮಃ ಹರಪ್ರಸಾದನು ಮನೆಬಿಟ್ಟು ಈಗ ಏಳು ವರ್ಷಗಳಾದವು. ಸುಂದರಾ ಬಿಟ್ಟು ಮೂರು ವರ್ಷಗಳಾದವು. ಈ ಅವಧಿಯಲ್ಲಿ ಎಷ್ಟೊಂದು ಸ್ಥಿತ್ಯಂತರಗಳು. ಈ ಘಟನೆಗಳಲ್ಲಿ ಎಷ್ಟು ಪಾಲಿಗೆ ಮನುಷ್ಯ ಸಾಹಸವು ಹೋರಾಡಿತು. ಉಳಿದೆಷ್ಟು ಪಾಲು ದೈವೀ ನ್ಯಾಯದಿಂದ ನಡೆಯಿತು ಎಂಬುದರ ವಿಶ್ಲೇಷಣೆಯಿಂದ ಜಗತ್ತಿನ ಅಶಾಂತಿ ಉನ್ಮಾದ ಅಸೂಯೆ ದ್ವೇಷಗಳು ಎಷ್ಟೊಂದು ಕ್ಷತಕವಿರುವವೆಂಬ ಅನುಭವವು ಮಾನವರಲ್ಲಿ ಉತ್ಪನ್ನವಾಗುವದು.

Time is the best healer. ಕಾಲಹರ ಕಲ್ಪಹರ ಎಂಬುದರ ಮಂತ್ರ ತಾತ್ಪರ್ಯವನ್ನು ನಾವು ಅರಿಯುವೆವು.

ಸಹೋದ್ಯೋಗಿನಿ ಅಧಿಕಾರಿಣಿಗೆ ಆಗ ತಂತಿ ಸಂದೇಶವನ್ನು ಕೊಟ್ಟೆನು. ಅವರು ಅದನ್ನು ಓದಿ ಮುಗಿಸುವಷ್ಟರಲ್ಲಿ ನಿನ್ನೆಯೇ ಸಿದ್ಧಪಡಿಸಿದ ಎರಡೂ ಪ್ರಕರಣಗಳ ಕಾಗದ ಪತ್ರಗಳನ್ನು ಅವರೆದುರು ಇಡಿಸಿದೆನು. ಹತ್ತು ಹದಿನೈದು ನಿಮಿಷಗಳ ಕಾಲ ನಾನು ನಿರೀಕ್ಷಣಾಲಯದ ಸುತ್ತು ಇರುವ ತೋಟದಲ್ಲಿ ಸುತ್ತಾಡಿ ತಂಗಾಳಿಯನ್ನು ಸವಿದು ಬಂದೆನು. ಸಾವರಿಸಿ ಎದ್ದು ಮುಂದೆ ಬಂದು ಅಧಿಕಾರಿಣಿಯು ಹಸ್ತಾಂದೋಲವನ್ನಿತ್ತು ಅಭಿನಂದನೆಯ ಮಳೆಯನ್ನೇ ಸುರಿಸಿದಳು.

ನಿನ್ನೆಯೇ ನಾವು ಈ ಇಬ್ಬರು ಮಕ್ಕಳಿಗಾಗಿ ಮಾಡಿಸ ಪ್ರಯಾಣದ ವ್ಯವಸ್ಥೆಯಲ್ಲಿ ಬಹುಪಾಲು ಯಾವ ಸ್ಥಿತ್ಯಂತರವೂ ಅವಶ್ಯವಿಲ್ಲವೆಂದು ಇಂದು ಪುನಃ ನಿರ್ಧರಿಸಿದೆವು. ಉತ್ತರದಲ್ಲಿ ನಮ್ಮ ಉತ್ತರವನ್ನೇ ಎದುರು ನೋಡುತ್ತಿರುವ ಅಧಿಕಾರಿಗಳಿಗೂ ಮತ್ತು ಪಾಲಕರಿಗೂ ಸಮಾಧಾನ ವಾಗಲೆಂದು ಕೂಡಲೇ ಒಂದು ಚಿಕ್ಕ ತಂತಿ ಸಂದೇಶವನ್ನು ಕಳಿಸಿದೆವು.

(Received Telegrams. Thanks. To morrow Juvenile court, Mostly court Favourably considers your major part request. In forming your office tomorrow court final decision and further arrangements. Probation Officer Hubli)

"ನಿಮ್ಮ ಸಂದೇಶಗಳು ಬಂದಿವೆ. ಉಪಕಾರವಾಗಿದೆ. ಮಕ್ಕಳ ನ್ಯಾಯಾಲಯವು ನಾಳೆ ನಡೆಯುವದು. ನಿಮ್ಮ ನಿವೇದನೆಯ ಬಹುಭಾಗ ವನ್ನು ಬಹುಶಃ ನ್ಯಾಯಾಲಯವು ಈಡೇರಿಸುವದು. ನ್ಯಾಯಾಲಯದ ತೀರ್ಪನ್ನೂ ಮುಂದಿನ ವ್ಯವಸ್ಥೆಯ ವಿವರವನ್ನೂ ನಾಳೆ ತಿಳಿಸುವೆವು. ನಿರೀಕ್ಷಣಾಧಿಕಾರಿ ಹುಬ್ಬಳ್ಳಿ")

ಹರಪ್ರಸಾದನ ಪ್ರಕರಣದಲ್ಲಿ ನಾನು ಕೊನೆಯ ನಾಲ್ಕು ಸೂಚನೆ ಗಳನ್ನು ಬರೆಯುವೆನು. ಅಧಿಕಾರಿಣಿ ಸುಂದರಾಳ ನಾಲ್ಕು ಮಾತುಗಳನ್ನು ಬರೆಯಲಿ ಎಂದು ಸೂಚಿಸಿದಾಗ, ಅಧಿಕಾರಿಣಿಯು ತೀವ್ರ ಅಸಮ್ಮತಿಯನ್ನು ತೋರಿಸಿದಳು. ನನ್ನ ಸಾಹಸದ ಪರಿಣಾಮದಲ್ಲಿ ತಾನು ನಾಲ್ಕು ಅಕ್ಕಿ ಸೇರಿಸುವದಿಲ್ಲವೆಂದೂ, ತಾನು ಇನ್ನೇನಾದರೂ ವಿಶೇಷ ರೀತಿಯ ಸಹಾಯ ವನ್ನು ಸುಂದರಾಳ ಪ್ರಕರಣದಲ್ಲಿ ನನ್ನ ಮಾರ್ಗದರ್ಶನದಲ್ಲಿ ಮಾಡಬಹು-ದೆಂದೂ ಹೇಳಿ ಕಾಗದ ಪತ್ರಗಳನ್ನು ಕ್ರಮಪಡಿಸುವದೂ; ಅವುಗಳಿಗೆ ಗುಂಡು ಸೂಜಿ, ನೂಲು, ಮುದ್ರೆ ಇವುಗಳನ್ನು ಹಾಕುವದೂ ತನ್ನದೆಂದು ಹೇಳಿ ಹುಸಿ ನಗೆಯಿಂದ ಆ ಕಾರ್ಯ ಮಾಡಹತ್ತಿದಳು.

ನಾನು ಆ ಎರಡೂ ಪ್ರಕರಣಗಳಲ್ಲಿದ್ದ ಒಂದೇ ಒಂದು ಮಾತಿನ ಬಳ್ಳಿಯನ್ನು ಕೆಂಪು ಮಸಿಯಿಂದ ತೆಗೆದು ಹಾಕಿದೆನು. ಈ ಎರಡೂ ಮಕ್ಕಳ ಮಾರ್ಗದಲ್ಲಿದ್ದ ದುಷ್ಟ ಜನರ ಮುಳ್ಳುಬೇಲಿಯನ್ನು ನ್ಯಾಯಾಲಯವು ಆಜ್ಞೆ ಇತ್ತು ಕಿತ್ತು ಹಾಕಿಸಬೇಕು ಎಂಬುದೇ ಆ ಮಾತಿನ ಬಳ್ಳಿಯಾಗಿತ್ತು. ಆ ಬಳ್ಳಿಯ ಮೇಲೆ ಕೆಂಪು ಗೆರೆಯ ಗುರುತನ್ನು ಎಳೆದು ಆ ಪ್ರಕರಣಗಳನ್ನು ಕಟ್ಟಿಡಲು ಹೇಳಿ ಇಳಿ ಹೊತ್ತಿನಲ್ಲಿ ಮನೆಗೆ ತೆರಳಿದೆನು.

ನಾನು ನಿರೀಕ್ಷಣಾಲಯ ಬಿಡುವಾಗ, ಅಧಿಕಾರಿಣಿಯು ಸಹಾಯಕರನ್ನೂ ಹರಪ್ರಸಾದ ಸುಂದರಾ ಇನ್ನಿತರ ನಾಲ್ಕಾರು ಮಕ್ಕಳನ್ನೂ ಸಾಧು ಸಮರ್ಥನನ್ನೂ ಕೂಡಿಸಿ ಒಂದು ಸಭೆಯನ್ನೇ ನಡೆಸಿದ್ದರು.

ಎಷ್ಟಾದರೂ ತಮ್ಮದು ಹೆಣ್ಣು ಹೃದಯ. ಪುರುಷ ಅಧಿಕಾರಿಗಳಂತೆ ಎಷ್ಟೂ ಮನಸ್ಸಿಗೆ ಹಚ್ಚಿಕೊಳ್ಳದಂತೆ ಕಾರ್ಯ ಮಾಡಲು ತಮಗೆ ಸಾಧ್ಯವಿಲ್ಲ. ಈ ಸುಂದರಾಳನ್ನು ಮರಳಿ ಅವಳ ಊರಿಗೆ ಕಳಿಸುವಾಗ ತಮ್ಮ ಗತಿ ಏನು? ಈಗ ಸೈಕಲ್ ಹತ್ತಿ ಮನೆಗೆ ತೆರಳಿದ ಅಧಿಕಾರಿಯು ಹರಪ್ರಸಾದ ಸುಂದರಾ ಸಮರ್ಥರನ್ನು ಅವರವರ ಊರಿಗೆ ಕಳಿಸುವಾಗ ಹೇಗೆ ನಡೆದುಕೊಳ್ಳುವರೋ ಎಂಬುದನ್ನು ಪರೀಕ್ಷಿಸಬೇಕಾಗಿದೆ. ಈ ಮೂವರು ಅದೆಂತು ಈ ಎಲ್ಲ ಬಳಗವನ್ನು ಬಿಟ್ಟು ಹೊರಡುವರೋ ಎಂಬುದನ್ನು ನೋಡಬೇಕಾಗಿದೆ ಎಂದು ಮೊದಲಾಗಿ ಅಧಿಕಾರಿಣಿ ನುಡಿದಾಗ ಆ ಮೂವರೂ ಒಬ್ಬೊಬ್ಬರೇ ಎದ್ದು ಗಂಭೀರ ಮುಖದಿಂದ ಬೇರೆಡೆ ಹೋಗಿ ಕುಳಿತರೆಂದು ಸಹಾಯಕರು ನನಗೆ ಸಂಜೆ ತಿಳಿಸಿದರು.

ಸಂಜೆಗೆ ಅಂಚೆಯಿಂದ ಡೆಹರಿ ಓನ್ ಸೋನ್‌ದಿಂದ ಹಿರಿಯ ಅಧಿಕಾರಿಗಳ ಸುದೀರ್ಘವೂ ಪೂರ್ಣ ವಿವರವುಳ್ಳದ್ದೂ ಆದ ಪತ್ರದ ಕಟ್ಟು ನಮಗೆ ಬಂದಿತು. ಸಹೋದ್ಯೋಗಿ ಅಧಿಕಾರಿ ಮತ್ತು ಅಧಿಕಾರಿಣಿಯರು ನನಗಾಗಿ ಆ ಎರಡು ಪ್ರಕರಣಗಳ ಮುಖ್ಯ ಮುಖ್ಯ ಮಾತುಗಳನ್ನು ಕೆಂಪು ಗೆರೆಗಳಿಂದ ಗುರುತಿಸಿ ನೆರವಾದರು. ಈ ಮಾತುಗಳ ನೆರವಿನಿಂದ ನ್ಯಾಯಾಲಯಕ್ಕೆ ಒಪ್ಪಿಸುವ ಕಾಗದ ಪತ್ರಗಳ ಸಿದ್ಧತೆಯೂ ಮುಗಿದಂತಾಯಿತು.

# (೨೬)

ಮರುದಿನ ನ್ಯಾಯಾಧೀಶರು ಎಂದಿಗಿಂತಲೂ ಒಂದು ಗಂಟೆ ಮುಂಚೆಯೇ ನ್ಯಾಯಾಲಯಕ್ಕೆ ಬಂದರು. ಗೌರವ ನ್ಯಾಯಾಧೀಶರು ಬರುವಷ್ಟರಲ್ಲಿ ನಾವು ಒಪ್ಪಿಸಿದ ಕಾಗದ ಪತ್ರಗಳನ್ನು ಸಮಗ್ರವಾಗಿ ಓದಿದರು. ಹರಪ್ರಸಾದ ಸುಂದರಾ ಮತ್ತು ಸಮರ್ಥರನ್ನು ಕರೆಯಿಸಿ ಕೊಂಡರು. ಉತ್ತರ ದೇಶದಿಂದ ಇಲ್ಲಿಗೆ ಬಂದಿರುವ ಈ ಮೂವರೂ ಅಮಾನುಷವಾದ ಕಷ್ಟ ನಷ್ಟಗಳಿಗೆ ಗುರಿಯಾಗಿ ಯಾತನೆ ಪಟ್ಟಿರುವದು ತಮಗೆ ವಿಚಾರಣೆಯಿಂದ ತಿಳಿದು ಬಂದಿದೆಯೆಂದೂ ಮೂವರಿಗೂ ನ್ಯಾಯಾಲಯದ ಸಹಾನುಭೂತಿ ಮತ್ತು ಸಕಾಲಿಕ ಸಹಾಯ ದೊರೆಯುವ ದೆಂದೂ ತಿಳಿಸಿದರು. ಗೌರವ ನ್ಯಾಯಮಂಡಲವು ಎಂದಿನಂತೆ ಸಮಯಕ್ಕೆ ಸರಿಯಾಗಿ ಬಂದಿತು.

ನ್ಯಾಯಾಧೀಶರು ಇಂದು ಈ ಪ್ರಕರಣಗಳಲ್ಲಿ ತಮ್ಮ ವಿಶಿಷ್ಟ "ಸಾರಾಂಶ ಅಧಿಕಾರ"ವನ್ನು (Summary powers) ಒಪ್ಪಿ ಉಪಯೋಗಿಸುವದಾಗಿ ಸಾರಿ, ಹರಪ್ರಸಾದ ಮತ್ತು ಸುಂದರಾ ಅವರ ಪ್ರಕರಣಗಳನ್ನು ಒಂದೊಂದಾಗಿ ಎತ್ತಿಕೊಂಡು ಸೂತ್ರ ರೂಪವಾಗಿ ಎರಡು ಮಾತುಗಳಲ್ಲಿ ತಮ್ಮ ತೀರ್ಪನ್ನಿತ್ತರು : "ನ್ಯಾಯಾಲಯದ ವೆಚ್ಚದಿಂದ ಈ ಬಾಲಕ ಹರಪ್ರಸಾದ ಈ ಬಾಲಿಕೆ ಸುಂದರಾ ಇವರನ್ನು ಅವರವರ ಊರಲ್ಲಿರುವ ಪಾಲಕರಿಗೆ ಒಪ್ಪಿಸಬೇಕು''.......................................

"ಡೆಹರಿ–ಓನ್–ಸೋನ್ ಪೋಲೀಸ ಅಧಿಕಾರಿಗಳ ಮುಖಾಂತರ ಅಲ್ಲಿಯೇ ಇರುವ ಇಬ್ಬರೂ ಪಾಲಕರಿಗೆ ಇಲ್ಲಿಯ ಇಬ್ಬರು ನಿರೀಕ್ಷಣಾ ಅಧಿಕಾರಿಗಳು ಈ ಬಾಲಕ ಬಾಲಿಕೆಯರನ್ನು ಕರೆದೊಯ್ದು ಒಪ್ಪಿಸಬೇಕು."

ಎರಡನೆಯ ಮಾತು ಓದಿದಾಗ ನಾನು ದಿಗ್‌ಭ್ರಮೆಗೊಂಡೆನು. ಆಗ ನ್ಯಾಯಾಧೀಶರು ತಮ್ಮ ನಾಲ್ಕು ನಿರ್ಧಾರದ ಮಾತುಗಳನ್ನು ನುಡಿದರು:

"ಅಧಿಕಾರಿ ಮಿತ್ರರೆ, ಇಂದಿನ ಕಾರ್ಯ ಕಲಾಪಗಳು ಇಲ್ಲಿಗೆ ಮುಗಿದವು. ಇನ್ನು ಮುಂದಿನ ಮಾತುಗಳು ನ್ಯಾಯಾಧೀಶರು ವ್ಯಕ್ತಿ ಪರರಾಗಿ ಮಾನವೀಯತೆಯ ಮೂಲದಿಂದ ಆಡಿದಂತಹದೆಂಬುದನ್ನು ನೆನಪಿನಲ್ಲಿಡಿರಿ. ನೀವು ಡೆಹರಿ-ಓನ್-ಸೋನ್ ಪ್ರವಾಸ ಕೈಕೊಂಡು ಅಲ್ಲಿ ಈ ಮೂವರನ್ನು ಯೋಗ್ಯ ರೀತಿಯಲ್ಲಿ ನೆಮ್ಮದಿಯಿಂದ ನೆಲೆಗೊಳಿಸಿದಾಗಲೇ ನಮ್ಮ ನ್ಯಾಯಾಲಯದ ತೀರ್ಪು ಪೂರ್ಣವಾಗುವದು. ಮಕ್ಕಳ ಕಾನೂನಿನ ಉದ್ದೇಶವೂ ಸಾರ್ಥಕವಾಗಿ ಈಡೇರುವದು.

"ದೇಶದಲ್ಲಿ ಇಂತಹ ಘಟನೆಗಳು ಪ್ರತಿದಿನ ಅದೆಷ್ಟು ನಡೆದು ನಿಮ್ಮಂತಹ ಅಧಿಕಾರಿಗಳ ನೆರವಿಲ್ಲದೆ ಅದೆಷ್ಟು ಮಕ್ಕಳು ದೇಶಾಂತರದಲ್ಲಿಯೇ ತಮ್ಮ ಬಾಳನ್ನು ಹಾಳುಮಾಡಿಕೊಳ್ಳುವವೋ ! ನ್ಯಾಯಸ್ಥಾನದಲ್ಲಿ ದೇವತಾ ಕಾರ್ಯ ನಡೆಯಬೇಕಾದರೆ ನಿಮ್ಮಂತಹ ಅಧಿಕಾರಿಗಳು ಮಾನವೀಯ ಅನುಕಂಪದಿಂದ ಈ ಕಾರ್ಯಕ್ಕೆ ಕಂಕಣಬದ್ಧರಾಗಬೇಕು. ಧೈರ್ಯದಿಂದ ಕೃತಕೃತ್ಯತೆಯ ಅಭಿಮಾನದಿಂದ ಈ "ಯಾತ್ರೆ"ಯನ್ನು ಕೈಕೊಳ್ಳಿರಿ. ನಿಮಗೂ ನಮಗೂ ಕೂಡಿಯೇ ಆತ್ಮತೃಪ್ತಿಯಾಗುವದು. ನೀವು ಈ ಮೂವರೊಡನೆ ಹೊರಡುವ ದಿನ ಎರಡು ಗಂಟೆ ಮೊದಲು ನನ್ನನ್ನು ಕಾಣುವದು ಮರೆಯಬೇಡಿರಿ. ಒಂದು ಆಪ್ತಾಲೋಚನೆ-ಮಂತ್ರಾಲೋಚನೆ ಅನ್ನಿರಿ—ಕೂಡಿ ಮಾಡುವದಿದೆ. ಒಟ್ಟಿನ ನಿರ್ಣಯವನ್ನು ನೀವು ಕಾರ್ಯಗತಗೊಳಿಸಬೇಕು. ನಿಮ್ಮ ಅಧಿಕಾರಿ ವರ್ಗ, ಸಹಾಯಕವರ್ಗ, ದೇಶದ ಪೋಲೀಸ ಅಧಿಕಾರಿ ಮತ್ತು ಅವರ ಸಹಾಯಕ ವರ್ಗ ಇವರೆಲ್ಲರಿಗೂ ನಾನು ನಮ್ಮ ಗೌರವ ನ್ಯಾಯಮಂಡಲದವರೂ ಅಭಿನಂದನೆಗಳನ್ನು ಉತ್ತರೋತ್ತರ ಅಭಿವೃದ್ಧಿಯನ್ನು ಕೋರುತ್ತೇವೆ".

ನ್ಯಾಯಾಧೀಶರು ನಮ್ಮೆಲ್ಲರನ್ನೂ ಈ ರೀತಿ ದೇವತಾ ಕಾರ್ಯದಲ್ಲಿ ಬದ್ಧಕಂಕಣರನ್ನಾಗಿ ಮಾಡಿದರು. ಈ ಪರಚಿಂತನೆಯ ವ್ಯವಹಾರವು ನಮ್ಮ ಇಹದ ವ್ಯವಹಾರವನ್ನೇ ಮರೆಸಿತ್ತು. ಸಹಾಯಕ ವರ್ಗದವರು ಸಮಯವನ್ನು ಸೂಚಿಸಿದಾಗಲೇ ನಾವು ನ್ಯಾಯಾಧೀಶರ ವಿಶ್ರಾಂತಿಯ ಉಪಹಾರದ ನೆನಪು ತಂದುಕೊಂಡೆವು.

ಉಪಹಾರದ ಸಮಯದಲ್ಲಿ ನ್ಯಾಯಾಧೀಶರು ಸಮರ್ಥನನ್ನು ಕರೆಯಿಸಿ ಅವನ ಪ್ರವಾಸದ ವಿಷಯ ಕೇಳಿದರು. ಸಮರ್ಥನು ನೂರರ ಎರಡು ನೋಟುಗಳನ್ನು ಒಳ ಅಂಗಿಯಿಂದ ಬಿಚ್ಚಿ ನ್ಯಾಯಾಧೀಶರೆದುರು ಇರಿಸಿದನು. ತೆಗೆದು ತನ್ನಲ್ಲಿಯೇ ಇರಿಸಿಕೊಳ್ಳಲು ಹೇಳಿ, ಅವರು ಅವನ ಬೆನ್ನು ಚಪ್ಪರಿಸಿದರು. ಅವರ ಬಳಿಯಲ್ಲಿಯೇ ಇದ್ದ ಪೋಲೀಸ ಅಧಿಕಾರಿಗಳಿಗೆ ಈ ಪ್ರವಾಸದಲ್ಲಿ ಎಲ್ಲ ಬಗೆಯ ನೆರವು ಸಮರ್ಗೆ ದಾರಿಯುದ್ದಕ್ಕೂ ದೊರೆಯುವಂತೆ ಮಾಡುವದು ತಮ್ಮ ಸಾಮಾಜಿಕ ಕರ್ತವ್ಯವೆಂದು ನ್ಯಾಯಾಧೀಶರು ತಿಳಿಸಿ ಒಪ್ಪಿಸಿಕೊಂಡರು. ನಮ್ಮ ಸಹಾಯಕ ಬಸವಂತನನ್ನು ಕರೆದು, ತನ್ನ ಅಧಿಕಾರಿ ಪ್ರವಾಸ ಮುಗಿಸಿ ನಿರೀಕ್ಷಣಾಲಯಕ್ಕೆ ಬರುವಷ್ಟು ಕಾಲ ಅವರ ರಕ್ಷಣೆ ಮಾಡುವದು ಅವನ ಕರ್ತವ್ಯವೆಂದು ತಿಳಿಸಿ, ಅವನಿಂದ ಮಾತು ತೆಗೆದುಕೊಂಡರು. ನಮ್ಮ ಕಡೆಗೆ ನೋಡಿ ಮುಗುಳುನಗೆ ನಕ್ಕರು. ನ್ಯಾಯಾಧೀಶರಿಗೆ ನಾವು ಕೃತಜ್ಞತೆಯಿಂದ ನಮಸ್ಕರಿಸಿದೆವು. ಅವರು ತಮ್ಮ ಮುಂಗೈಗಳನ್ನು ಚಾಚಿ ನನ್ನೊಡನೆ ಹಸ್ತಾಂದೋಲನವನ್ನು ಮಾಡಿ ನನಗೆ ಅದ್ವಿತೀಯ ಪುರಸ್ಕಾರವನ್ನಿತ್ತರು.

ನಾನು ಒಳಗೆ ತುಂಬಿಕೊಂಡು ಬಂದ ಅನೇಕ ಭಾವನೆಗಳನ್ನು ಪ್ರತಿಕ್ರಿಯೆಯು ಕಟ್ಟೊಡೆದು ಹೊರಚಲ್ಲಿತು: "ಮಾನ್ಯರೆ! ಮಾಡುವೆನೆಂದರೆ ನಾವು ಮಾಡುವದಾದರೂ ಎಷ್ಟು? ದೇವರ ಮಾರ್ಗದರ್ಶನದಲ್ಲಿ ವಿಶ್ವಾಸವಿರಿಸಿಕೊಂಡಿದ್ದೇವೆ ಎಂದು ತಮ್ಮ ನ್ಯಾಯಪೀಠದ ಎದುರು ಪ್ರತಿಜ್ಞೆ ಮಾಡಿ ಅದರಂತೆ ನಡೆದುಕೊಳ್ಳಲು ನಮ್ಮ ಶಕ್ತಿಗನುಸಾರವಾಗಿ ಪ್ರಯತ್ನಿಸುತ್ತಿರುವದರಿಂದಲೇ ಆಗೊಮ್ಮೆ ಈಗೊಮ್ಮೆ ಇಂತಹ ಚಮತ್ಕೃತಿಗಳನ್ನು ದೈವೀ ಲೀಲೆಯು ನಮ್ಮಿಂದ ನೆರವೇರಿಸಿಕೊಳ್ಳುತ್ತದೆ. ತಾವು ಈ ನಮ್ಮ ನಮ್ಮ ಅಭಿಪ್ರಾಯವನ್ನು ಮನ್ನಿಸುವಿರಷ್ಟೆ!"

ನನ್ನ ಈ ವಿಚಾರವನ್ನು ನ್ಯಾಯಾಧೀಶರು ಸಮ್ಮತಿಸಿದರು. ಮತ್ತು "ದೇವರೇ ಈ ಇಬ್ಬರು ಮಕ್ಕಳ ವಿಷಯದಲ್ಲಿ ನ್ಯಾಯ ನಿರ್ಣಯವನ್ನು ಕೊಟ್ಟಿರುವನು. ಇದು ಸತ್ಯ. ಈ ಎರಡು ಪ್ರಕರಣಗಳ ಪ್ರಾರಂಭ ಮತ್ತು

ಪರಿಣಾಮ ಮಾನವ ಬುದ್ಧಿಗೆ ನಿಲುಕದಂತಹವು. ದೈವೀ ನ್ಯಾಯದಾನದ ದಿಕ್ಸೂಚಿಯನ್ನು ಇಲ್ಲಿ ನಾವು ಕಾಣಬಹುದು. ಸತ್ಯಕ್ಕೇ ಗೆಲುವು ಎಂಬು ದನ್ನು ಅದು ಕೈ ಎತ್ತಿ ಹೇಳುವದು. ನಾವೆಲ್ಲರೂ ದೈವೀ ಲೀಲೆಯನ್ನು ನಿಮಿತ್ತ ಮಾತ್ರರಾಗಿ ಪೂರ್ಣಗೊಳಿಸುತ್ತಿದ್ದೇವೆ. ದೇವರನ್ನು ಸ್ಮರಿಸಿ ಕಾರ್ಯ ಮಾಡುತ್ತಿರುವ ನಮ್ಮಲ್ಲಿ ಅಭಿಪ್ರಾಯಗಳು ಏಕರೂಪವಾಗಿರುವವು. ಸಂದೇ ಹವೇ ಬೇಡ. ನಾವೂ ನೀವೂ ಕೂಡಿಯೇ ಮಾಡಬೇಕಾಗಿರುವ ಉಳಿದ ಮುಂದಿನ ಕಾರ್ಯವನ್ನು ನಮ್ಮ ಪರವಾಗಿ ನೀವು ಮಾಡಿರಿ. ಇಷ್ಟಾದರೆ ನಮ್ಮ ಆತ್ಮಕ್ಕೆ ತೃಪ್ತಿಯಾಗುವದು'' ಎಂದರು.

ಉಪಹಾರ ಮುಗಿಸಿ ನ್ಯಾಯಾಧೀಶರು ನ್ಯಾಯಾಲಯಕ್ಕೆ ಬಂದರು. ಪರಪ್ರಸಾದ ಮತ್ತು ಸುಂದರಾ ಅವರಿಗೆ ತಮ್ಮ ಶುಭಾಶಯಗಳನ್ನು ಹೇಳಿ ಅಂದಿನ ಕಾರ್ಯವನ್ನು ಮುಗಿಸಿದರು.

ನ್ಯಾಯಾಧೀಶರು ತೀರ್ಮಾನವನ್ನಿತ್ತ ಮೇಲೆ ಹೆಚ್ಚು ಸಮಯ ಮಕ್ಕ ಳನ್ನು ನಿರೀಕ್ಷಣಾಲಯದಲ್ಲಿ ಉಳಿಸಿಕೊಳ್ಳುವದು ನ್ಯಾಯ ಸಮ್ಮತವಾಗದು. ಐದನೆಯ ದಿನ ಹೊರಡುವದಾಗಿ ನ್ಯಾಯಾಲಯಕ್ಕೆ ಮತ್ತು ಪೋಲೀಸ ಅಧಿ ಕಾರಿಗಳಿಗೆ ತಿಳಿಸಿದೆವು. ನಾನು, ಸಹೋದ್ಯೋಗಿ ಅಧಿಕಾರಿಣಿ, ಬಸವಂತ ಮೂವರು ನಿರೀಕ್ಷಣಾಲಯದಿಂದ ಹೊರಡುವದು ಗೊತ್ತಾಯಿತು. ನ್ಯಾಯಾ ಧೀಶರ ಸೂಚನೆಯಂತೆ ಒಬ್ಬ ಪೋಲೀಸ ಅಧಿಕಾರಿ, ಒಬ್ಬ ಮಹಿಳೆ ಒಬ್ಬ ಪುರುಷ ಈ ಪೋಲೀಸ ಪಡೆ, ಇವರು ಮೂವರು ಜೊತೆಯಲ್ಲಿದ್ದು ಕರೆದೊ ಯ್ಯಬೇಕೆಂಬುದೂ (Police Escort) ನಿಶ್ಚಿತವಾಯಿತು. ಇಬ್ಬರು ಮಕ್ಕಳ ಕಟು ಅನುಭವದ ಸೂಚನೆಯಂತೆ ನಮ್ಮ ಪ್ರವಾಸವನ್ನು ಮೊಗಲ್‌ಸರಾಯಿ ರೇಲ್ವೆ ನಿಲ್ದಾಣವನ್ನು ತಪ್ಪಿಸಿ, ಕಲಕತ್ತಾ ಗಯಾ ಮಾರ್ಗದಿಂದ ಕೈಕೊಳ್ಳ ಬೇಕೆಂಬುದನ್ನು ನ್ಯಾಯಾಧೀಶರ ಅಪ್ಪಣೆ ಪಡೆದು ನಿರ್ಧರಿಸಿ, ಅದರಂತೆ ಮುಂಗಡವಾಗಿ ಟಿಕೆಟ್ಟುಗಳನ್ನು ಪಡೆದು ಸ್ಥಳಗಳನ್ನು ಕಾಯ್ದಿರಿಸಲಾಯಿತು. ಮುಖ್ಯ ಮುಖ್ಯ ರೇಲ್ವೆ ಜಂಕಶನ್‌ಗಳಲ್ಲಿರುವ ಪೋಲೀಸ ಅಧಿಕಾರಿಗಳಿಗೆ ಪ್ರಾರಂಭದಿಂದ ಡೆಹರಿ-ಓನ್-ಸೋನ್ ಪೂರ್ಣ ಎಲ್ಲರಿಗೂ ಮುಂಚಿತವಾಗಿ ಈ ಪ್ರವಾಸದ ವಿಷಯವನ್ನು ತಿಳಿಸಿ, ಅವಶ್ಯವಿದ್ದಲ್ಲಿ ರಕ್ಷಣೆಯ ಸಿದ್ಧತೆಯಲ್ಲಿ

ರಬೇಕೆಂದು, ಇಲ್ಲಿಯ ಮುಖ್ಯ ಪೋಲೀಸ ಅಧಿಕಾರಿಗಳಿಂದ ಅತ್ಯವಸರದ ಕಾಗದಗಳನ್ನು ಗುಪ್ತವಾಗಿ ಬರೆಯಿಸಲಾಯಿತು. ಇಂತು ಎಲ್ಲ ಶಿಷ್ಟಾಚಾರಗಳನ್ನು ಮುಗಿಸಿ, ಪ್ರವಾಸಕ್ಕೆ ಹೊರಡುವ ನಾವು ಆರು ಜನರು ನಮ್ಮ ನಮ್ಮ ಸಿದ್ಧತೆಗಳನ್ನು ಮಾಡಿಕೊಳ್ಳಲು ಎರಡೇ ದಿನಗಳು ಉಳಿದವು. ಹರಪ್ರಸಾದ ಸುಂದರಾ ಮತ್ತು ಸಮರ್ಥರಿಗೆ ಇತ್ತ ಕಡೆಯ ಒಂದೊಂದು ಉಡುಪನ್ನು ಕೊಡಿಸಲು ಸ್ಥಳೀಯ ಸಾಮಾಜಿಕ ಕಾರ್ಯಕರ್ತರೊಬ್ಬರು ಮುಂದೆ ಬಂದಿರುವದನ್ನು ಗೌರವ ನ್ಯಾಯಾಧೀಶರು ತಿಳಿಸಿದ್ದರು- ಅದೊಂದು ಕಾರ್ಯವನ್ನು ನಿರೀಕ್ಷಣಾಲಯದ ಇನ್ನೊಬ್ಬ ಅಧಿಕಾರಿಯು ನಮಗಾಗಿ ಮಾಡಿ ನಮ್ಮ ಭಾರವನ್ನು ಹಗುರು ಮಾಡಿದರು ಹೊರಡುವ ದಿನ ನಸುಕಿನಲ್ಲಿಯೇ ಎಲ್ಲರೂ ಕೂಡುವದೆಂದು ಗೊತ್ತುಪಡಿಸಿ ನಮ್ಮ ನಮ್ಮ ಸಿದ್ಧತೆಗೆ ತೆರಳಿದೆವು ಅಂದು ಈ ಎರಡು ಮಕ್ಕಳು ಯಾರು ಎಲ್ಲಿಯವರು ಎಂಬ ಶೋಧನೆಯಲ್ಲಿದ್ದಾಗಿನ ಸಚ್ಚಿದಾನಂದದ ಅಂದಿನ ಪ್ರಥಮಾವಸ್ಥೆಯ ಸ್ಥಿತಿಯು ಇಂದು ಸತ್ಯವು ನಿಶ್ಚಿತವಾಗಿರುವ ಇಂದಿನ ಪ್ರಬುದ್ಧ ಸ್ಥಿತಿಗಿಂತ ಮೃದುವಾಗಿತ್ತು. ಕಠೋರವಾಗಿರಲಿಲ್ಲ.

## ೨೭

ಐದನೆಯ ದಿನ ಹೊರಡುವವರೆಲ್ಲರೂ ಮುಂಜಾನೆ ೮ ಗಂಟೆಗೆ ನಿರೀಕ್ಷಣಾಲಯದಲ್ಲಿ ಕೂಡಿ ನಮ್ಮ ನಮ್ಮ ಸಿದ್ಧತೆಗಳ ಬಗೆಗೆ ಖಚಿತಪಡಿಸಿಕೊಂಡೆವು. ನಾವು ಪುನಃ ಇಲ್ಲಿಯೇ ಮಧ್ಯಾಹ್ನ ಕೂಡಿ ಇಲ್ಲಿಂದಲೇ ರೇಲ್ವೆ ನಿಲ್ದಾಣಕ್ಕೆ ಹೊರಡುವದೆಂದುಕೊಂಡು ಅಗಲಿದೆವು. ನಾನು ನ್ಯಾಯಾಧೀಶರ ನಿವಾಸಕ್ಕೆ ಹೋದೆನು. ಅವರು ಸೂಚಿಸಿದ ಕೆಲವು ವಿಚಾರಗಳನ್ನು ಮನನ ಮಾಡಿಕೊಂಡೆನು. ಹರಪ್ರಸಾದ ಸುಂದರಾ ಮತ್ತು ಸಮರ್ಥರನ್ನು ರೇಲ್ವೆ ನಿಲ್ದಾಣಕ್ಕೆ ಕರೆದೊಯ್ಯುವಾಗ ವಾಹನದಲ್ಲಿ ಅವರನ್ನು

ನ್ಯಾಯಾಲಯದ ಬಳಿ ಕರೆತಂದು ಅವರೊಡನೆ ಕೊನೆಯ ನಾಲ್ಕು ಸುಖದ ಮಾತುಗಳನ್ನು ಆಡಲು "ಅವಕಾಶ" ಮಾಡಿಕೊಡಬೇಕೆಂದು ನ್ಯಾಯಾಧೀಶರು ಹೇಳಿ, ಹೆಚ್ಚು ಮಾತಾಡಲಾರದೆ ಮೌನದಿಂದ ನಮಸ್ಕರಿಸಿ ಒಳಗೆ ಹೋದರು. ಅಂತಃಕರಣದ ಈ ಕರುಣಾ ರಸಗಂಗೆ ಎಲ್ಲಿ ಯಾವ ಕಾಲಕ್ಕೆ ಉಗಮವಾಗುವಳೋ, ಯಾರಿಂದಲೂ ಹೇಳುವದು ಸಾಧ್ಯವಿಲ್ಲ.

ನನ್ನ ಮನೆಗೆ ನೇರವಾಗಿ ಬಂದೆನು. ನಾನು ಮರಳಿ ಬರುವಷ್ಟು ಕಾಲ ಮನೆಯ ಅಗತ್ಯಗಳು ಸರಿಯಾಗಿ ಪೂರೈಕೆಯಾಗಿರುವವೋ ಎಂಬುದನ್ನು ನೋಡಿ ಖಚಿತಪಡಿಸಿಕೊಂಡೆನು. ಸ್ನಾನ-ಪೂಜಾದಿಗಳನ್ನೂ ಊಟೋಪಚಾರಗಳನ್ನೂ ಮುಗಿಸಿ ಪ್ರವಾಸದ ಸಿದ್ಧತೆಗಳನ್ನು ಮಾಡಿಕೊಂಡೆನು. ನಾನು ನಿರೀಕ್ಷಣಾಲಯಕ್ಕೆ ಬಂದಾಗ, ಮಧ್ಯಾಹ್ನ ೧೨-೩೦ಗಂಟೆಯಾಗಿತ್ತು. ಹದಿನೈದು ನಿಮಿಷಗಳಲ್ಲಿ ಉಳಿದವರೆಲ್ಲರೂ ಬಂದರು. ಸುಂದರಾ ಸಮರ್ಥ ಮತ್ತು ಹರಪ್ರಸಾದರು ತಮ್ಮ ಸಲಕರಣೆಗಳೊಂದಿಗೆ ಅಣಿಯಾಗಿ ಬಸವಂತನೊಂದಿಗೆ ಬಂದರು. ಮೂರು ವಾಹನಗಳು ಅಷ್ಟರಲ್ಲಿ ಬಂದು ನಿಂತಿದ್ದವು. ನಾವು ಈ ಮೂವರೊಂದಿಗೆ ನಿರೀಕ್ಷಣಾಲಯವನ್ನು ಬಿಟ್ಟು ಹೊರಡಬೇಕಾದರೆ ಹಿಂದಿನ ನಮ್ಮ ಪುಣ್ಯವನ್ನೆಲ್ಲ ವೆಚ್ಚ ಮಾಡಬೇಕಾಯಿತೆನ್ನಬಹುದು. ಎಷ್ಟೋ ಮಕ್ಕಳು ಪರಸ್ಪರ ಅನನ್ಯರಾಗಿ ಬೆಳೆದವರು ಈ ಕೊನೆಯ ಅಗಲುವಿಕೆಯನ್ನು ತಡೆಯಲಾರದೇ ಬೋರೆಂದು ದುಃಖಿಸಿದವು. ಈ ಎರಡೂ ಗುಂಪುಗಳ ನಡುವೆ ಹೋಗಿ ಇಬ್ಬರಿಗೂ ಬೆನ್ನುಗಳ ಮೇಲೆ ಕೈಯಾಡಿಸಿ ಸಾಂತ್ವನಗೊಳಿಸುವದರಲ್ಲಿ ನನಗೆ ಸಾಕುಬೇಕಾಯಿತು. ಇಲ್ಲಿಯೇ ಉಳಿಯುವ ಅಧಿಕಾರಿಗಳೂ ಉಳಿದ ಸಹಾಯಕರೂ ಬಂದು ಉಳಿದೆಲ್ಲ ಮಕ್ಕಳನ್ನು ಒಳಗೆ ಕಳಿಸಿದರು. ನಮಗೆ ಸುಖ ಪ್ರವಾಸವನ್ನು ಕೋರಿ ಬೀಳ್ಕೊಟ್ಟು ತಮ್ಮ ಕರ್ತವ್ಯಗಳತ್ತ ಸಾಗಿದರು. ನಮ್ಮ ವಾಹನಗಳು ನ್ಯಾಯಾಲಯದತ್ತ ಸಾಗಿದವು. ನಮ್ಮ ವಾಹನಗಳು ಬಂದುದನ್ನು ರಕ್ಷಕ ಪಡೆಯವರು ತಿಳಿಸಿದ ಕ್ಷಣದಲ್ಲಿಯೇ ನ್ಯಾಯಾಧೀಶರು ತಮ್ಮ ವಿಶ್ರಾಂತಿಯ ಕೊಠಡಿಗೆ ಹರಪ್ರಸಾದ ಸುಂದರಾ ಸಮರ್ಥರನ್ನೂ ನಮ್ಮನ್ನೂ ಕರೆಯಿಸಿಕೊಂಡರು. ಅವರು ಮಾತುಗಳನ್ನು ಬಳಸದೇ ಸನ್ನೆಯಿಂದಲೇ

ಮಕ್ಕಳಿಗೆ ಕುಶಲವನ್ನು ಕೋರಿದರೆನ್ನಬಹುದು. ಒಂದು ಒಟ್ಟೆ ತುಂಬ ತಿಂಡಿ-ತಿನಿಸು ಹಣ್ಣು-ಹಂಪಲಗಳನ್ನು ತರಿಸಿ ಇಟ್ಟುಕೊಂಡಿದ್ದನ್ನು ಮಕ್ಕಳಿಗಾಗಿ ವಾಹನಗಳಲ್ಲಿಡಲು ರಕ್ಷಕರಿಗೆ ಹೇಳಿದರು ಆಸನದಿಂದ ಎದ್ದು ಇಬ್ಬರು ಮಕ್ಕಳನ್ನು ತಮ್ಮ ತೋಳುಗಳಲ್ಲಿ ತಬ್ಬಿಕೊಂಡು ಹೊರಗೆ ವಾಹನದತ್ತ ಸಮೀಪ ಬಂದರು. ಸನ್ನೆಯಿಂದ ಮಕ್ಕಳಿಗೆ ವಾಹನದಲ್ಲಿ ಕುಳಿತುಕೊಳ್ಳಲು ಹೇಳಿ ತಮ್ಮ ಕರವಸ್ತ್ರದಿಂದ ತಮ್ಮ ಮುಖವನ್ನು ಉಮ್ಮಳದ ಶಮನಾರ್ಥವಾಗಿ ಒರೆಸಿಕೊಂಡರು. ಪುನಃ ಗಂಭೀರರಾಗಿ ಸಮರ್ಥನೊಡನೆ ಕುಶಲ ವಿನೋದ ಮಾಡಿದರು: " ಗಡ್ಡ ತೆಗೆಸು ! ಕುಡಿ ಮೀಸೆ ಇರಲಿ !" ಎಂದರು. "ತಮ್ಮ ಅಪ್ಪಣೆ! " ಎಂದು ಸಮರ್ಥ ಶಿರಬಾಗಿ ನಮಸ್ಕರಿಸಿ ಹಿಂದೆ ಸರಿದು ನಿಂತನು. ನ್ಯಾಯಾಧೀಶರು ಒಳಗೆ ಹೋದರು.

ನಾವು ಮುಂದಿನ ಆಜ್ಞೆಗಾಗಿ ನಿಂತೆವು. ನ್ಯಾಯಾಧೀಶರು ಒಳಗೆ ನನ್ನನ್ನು ಕರೆಯುತ್ತಿರುವರೆಂಬ ಆದೇಶ ಬಂದಿತು. ಕೊಠಡಿಗೆ ಹೋದೆನು. ಅವರು ಮೆಲ್ಲನೆ ಮುಖ್ಯ ನಾಲ್ಕು ಮಾತುಗಳನ್ನು ಹೇಳಿ ಆ ಕಾರ್ಯವನ್ನು ಸಹಜವಾಗಿ ಈಡೇರಿಸುವದು ಸಾಧ್ಯವಿದ್ದರೆ ಪ್ರಯತ್ನ ಮಾಡಲು ಸೂಚಿಸಿದರು: " ಇದು ಆಜ್ಞೆಯಲ್ಲ. ಒಬ ಹಿರಿಯ ವಯಸ್ಸಿನ ಕುಟುಂಬಸ್ಥನ ಸದಿಚ್ಛೆ " ಎಂದರು. ತ್ರಿಕರಣಪೂರ್ವಕವಾಗಿ ದೇವರ ಸಾಕ್ಷಿಯಾಗಿ ಈ ಕಾರ್ಯವನ್ನು ಈಡೇರಿಸಲು ಸಹಜವಾಗಿ ಪ್ರಯತ್ನ ಮಾಡುವದಾಗಿ ನಾನು ನಿವೇದಿಸಿದೆನು. ಹೊರಡಬಹುದೆಂದು ನಮಗೆ ಅನುಮತಿ ದೊರೆಯಿತು. ನಮಸ್ಕರಿಸಿ ಹೊರಗೆ ಬಂದೆನು. ನಮ್ಮ ವಾಹನಗಳು ರೇಲ್ವೆ ನಿಲ್ದಾಣವನ್ನು ತಲುಪಿದಾಗ ಮಧ್ಯಾಹ್ನ ೧—೩೦ ಗಂಟೆಯಾಗಿತ್ತು. ಅಲ್ಲಿ ಯಾವ ಬೀಳ್ಕೊಡುವ ಅನಪೇಕ್ಷಿತ ಕಾರ್ಯಗಳು ನಡೆಯದಂತೆ ಮುಂಜಾಗ್ರತೆ ವಹಿಸಿದ್ದರಿಂದ, ಗಾಡಿಯನ್ನೇರಲು ಯಾವ ಅಡೆತಡೆಯುಂಟಾಗಲಿಲ್ಲ. ಈ ರೇಲ್ವೆ ನಿಲ್ದಾಣದಲ್ಲಿ ಇಬ್ಬರು ಮಕ್ಕಳನ್ನು ಯಾವ ಸ್ಥಳದಲ್ಲಿ ನಾವು ವಶಪಡಿಸಿಕೊಂಡಿದ್ದೆವೋ ಆ ಸ್ಥಳಗಳಲ್ಲಿ ಅವರವರು ಕ್ಷಣಕಾಲ ನಿಂತು, ಸ್ಥಲ ಮಹಾತ್ಮೆಯ ಭೂಮಿ ತಾಯಿಗೆ ಭಕ್ತಿಯನ್ನರ್ಪಿಸಿದರು. ನಾವು ಅವರಿಗೆ ತಡೆಯಲಿಲ್ಲ. ಅಷ್ಟು ಮುಗಿಸಿ ಅವರೇ ನಮ್ಮನ್ನು ಬಂದು ಕೂಡಿಕೊಂಡರು.

ನಮ್ಮ ಪ್ರವಾಸವು ಸರಿಯಾಗಿ ೨-೧೫ ನಿಮಿಷಕ್ಕೆ ಪ್ರಾರಂಭವಾಯಿತು. ಕಾಯ್ದಿರಿಸಿದ ಸ್ಥಳವಿದ್ದುದರಿಂದ ವಿರಾಮವಾಗಿ ಪ್ರವಾಸ ಮಾಡಲು ಅನುಕೂಲವಾಯಿತು. ಇದಲ್ಲದೆ ನಮ್ಮೊಡನೆ ಇದ್ದ ಮೂವರು ತಮ್ಮ ತಮ್ಮ ಸ್ಥಳಗಳಿಗೆ ತಮ್ಮ ಇಚ್ಛೆಯಂತೆ ಹೋಟವರಾದ್ದರಿಂದ ಅವರ ಬಗೆಗೆ ವಿಶೇಷ ಭಯಪಡುವ ಕಾರಣವಿರಲಿಲ್ಲ. ಹೊರಗಿನವರ ಉಪದ್ರವಗಳನ್ನು ನಿವಾರಿಸಲು ಅಲ್ಲಲ್ಲಿ ಪೂರ್ವ ತಿಳಿವಳಿಕೆಯು ಸಿದ್ಧತೆಯೂ ಇತ್ತು. ನಾಲ್ಕಾರು ನಿಲ್ದಾಣಗಳು ದಾಟುವಷ್ಟು ಕಾಲ ಮಾತ್ರ ನಮ್ಮ ಸಾಧು ಸಮರ್ಥ ಸ್ವಲ್ಪ ಬೆದರಿದ ಕಣ್ಣುಗಳಿಂದ ಅತ್ತ ಇತ್ತ ಆಗ ಈಗ ಸುತ್ತು ಕಣ್ಣಿರುಸುತ್ತಿದ್ದನು. ಅವನ ಈ ಪೇಚಾಟ ಈ ಭಯಗಳಿಗೆ ಯಾವ ಕಾರಣವೂ ಇಲ್ಲ. ವ್ಯರ್ಥ ಪರಿಶ್ರಮ ಬೇಡ. ಎಂದು ನಾನು ಸ್ವಲ್ಪ ಅಧಿಕಾರ ವಾಣಿಯಿಂದ ಹೇಳಿದೆನು. ಆಗ ಎಲ್ಲವೂ ಸಮಾಧಾನದ ಸ್ಥಿತಿಗೆ ಮುಟ್ಟಿದವು. ನಮ್ಮ ಪ್ರವಾಸವು ಶಾಂತಿಯಿಂದ ಸುಸೂತ್ರವಾಗಿ ಮುಂದುವರಿಯಿತು.

ಅಲ್ಪ ಉಪಹಾರ, ಸಂಜೆಗೆ ಊಟ, ಅನುಕೂಲವಾದಷ್ಟು ನಿದ್ರೆ ಮಾಡುತ್ತ ಮರುದಿನ ಮುಂಜಾನೆ ಪುಣೆಗೆ ಮುಟ್ಟಿದೆವು. ಗಾಡಿಯನ್ನು ಇಳಿದು ಮುಂಬಯಿ ಗಾಡಿ ಹತ್ತಿದೆವು. ಮುಂಬಯಿಯಲ್ಲಿ ಸ್ನಾನ ಊಟೋಪಚಾರ ವಿಶ್ರಾಂತಿಗೆ ಅವಕಾಶ ದೊರೆಯಿತು. ಸಂಜೆಗೆ ಕಲಕತ್ತಾ ಮೇಲಿನಿಂದ ಹೊರಡುವದಕ್ಕೆ ನಮಗೆ ಸ್ಥಳವನ್ನು ಕಾಯ್ದಿರಿಸಲಾಗಿತ್ತು.

ವಿಶ್ರಾಂತಿಯ ಸಮಯ, ನಮಗೆ ತೀರ ಸಮೀಪದ ಸ್ನೇಹಿತರಾದ ಶ್ರೀ ರಾಮಚಂದ್ರ (!) ಅವರು ತಮ್ಮ ಸ್ನೇಹಿತರನ್ನು ದಿಲ್ಲಿಗೆ ಫ್ರೊಂಟಿಯರ ಮೇಲಿನಿಂದ ಕಳಿಸಲು ನಿಲ್ದಾಣದಲ್ಲಿ ಬಂದಿದ್ದರು. ದೂರದಿಂದಲೇ ನನ್ನನ್ನು ಗುರುತಿಸಿ ಬಂದು ಕುಶಲ ಪ್ರಶ್ನೆ ಮಾಡಿದರು. ಆ ಮಾತು ಈ ಮಾತು ಆಡಿ ನನ್ನ ಪ್ರವಾಸದ ಉದ್ದೇಶವನ್ನು ಸಂಕ್ಷಿಪ್ತವಾಗಿ ತಿಳಿದುಕೊಂಡು, ಈ ಪ್ರಕರಣಗಳಲ್ಲಿ ವಿಶೇಷ ಆಸಕ್ತಿಯನ್ನು ವ್ಯಕ್ತಪಡಿಸಿದರು. ಇಂದು ಒಂದು ದಿನವೂ ಮುಂಬಯಿಯಲ್ಲಿ ಉಳಿದುಕೊಳ್ಳುವ ಸಾಧ್ಯತೆಯಿಲ್ಲವೆಂದು ನಾವು ಸ್ಪಷ್ಟ ನುಡಿದಾಗ, ಮರಳಿ ಬರುವಾಗ ಒಂದು ದಿನ ಉಳಿಯಲೇಬೇಕೆಂದು

ಒತ್ತಾಯ ಪಡಿಸಿದರು. ಸ್ನೇಹದ ಆಗ್ರಹಕ್ಕೆ ಎದುರು ಆಡುವದೆಂತು? ಒಪ್ಪಿಕೊಂಡೆನು. ಅವರೊಡನೆ ನಾವೆಲ್ಲರೂ ಸಂಜೆಯ ಉಪಹಾರವನ್ನು ತೀರಿಸಿದೆವು. ಅವರ ಗಾಡಿಯತ್ತ ಅವರು ನಮ್ಮ ಗಾಡಿಯತ್ತ ನಾವು ಸಾಗಿದೆವು. ನಮ್ಮ ಗಾಡಿ ಸಂಜೆ ಏಳು ಗಂಟೆಗೆ ಹೊರಟಿತು. ಮರುದಿನ ನಾಗಪುರ, ಆದರ ಮರುದಿನ ಮುಂಜಾನೆ ೬ಕ್ಕೆ ಟಾಟಾನಗರ. ೧೧ಕ್ಕೆ ಹೌರಾ ಮುಟ್ಟಿದೆವು. ಮುಂಬಯಿಯಲ್ಲಿಯಂತೆ ಕಲಕತ್ತಾದಲ್ಲಿಯೂ ಸಂಜೆಗೆ ಹೊರಡುವಷ್ಟು ಕಾಲ ಸ್ನಾನ, ಊಟ ವಿಶ್ರಾಂತಿಯಲ್ಲಿ ಕಳೆದೆವು. ಅಲ್ಲಿಯ ರೇಲ್ವೆ ಪೋಲೀಸ ವಾಹನದಲ್ಲಿ ಎಲ್ಲರೂ ಕಲಕತ್ತಾ ನಗರದಲ್ಲಿ ಸುತ್ತಾಡಿ ಬಂದೆವು. ಸಂಜೆಯ ಉಪಹಾರ ಮುಗಿಸಿ ೮ ಗಂಟೆಗೆ ಅಲ್ಲಿಂದ ಹೊರಟು ಮರುದಿನ ಮುಂಜಾನೆ ಗಯಾ ಮಾರ್ಗವಾಗಿ ಡೆಹರಿ—ಓನ್—ಸೋನ್ ಮುಟ್ಟಿದಾಗ ೬—೩೦ ಗಂಟೆಯಾಗಿತ್ತು. ನಮ್ಮ ಊರಿನಿಂದ ಹೊರಟಿದ್ದು ನಾವು ಗುರುವಾರ. ನಾವು ಮುಟ್ಟಿದ್ದು ಸೋಮುವಾರ, ಐದನೆಯ ದಿನ.

ರೇಲ್ವೆ ನಿಲ್ದಾಣದಲ್ಲಿ ಪೋಲೀಸ ಹಿರಿಯ ಅಧಿಕಾರಿಗಳು ತಮ್ಮ ಸಹಾಯಕರೊಂದಿಗೆ ನಮ್ಮ ತಂಡವನ್ನೇ ನಿರೀಕ್ಷಿಸಿ ನಿಂತಿದ್ದರು. ನಾವು ಇಳಿದು ಪರಸ್ಪರ ಪರಿಚಯ ಮುಗಿಸಿ, ಪೋಲೀಸ ವಾಹನದಲ್ಲಿ ಎಲ್ಲರೂ ನೇರವಾಗಿ ಹರಪ್ರಸಾದನ ತಂದೆ, ಸುಂದರಾಳ ಅಣ್ಣಂದಿರು ವಿಶ್ರಾಂತಿಯನ್ನು ಉಪಭೋಗಿಸುತ್ತಿದ್ದ ಶುಶ್ರೂಷಾಲಯಕ್ಕೆ ತೆರಳಿದೆವು. ಆಗ ಸರಿಯಾಗಿ ಪ್ರಾತಃಕಾಲದ ೮ ಗಂಟೆಯಾಗಿತ್ತು.



೨೮

ನಾವೆಲ್ಲರೂ ಅತಿಥಿಗಳ ಕೊಠಡಿಯಲ್ಲಿ ಉಳಿದೆವು. ಮುಖ್ಯ ವೈದ್ಯರು ಬಂದು ಆಗಂತುಕರಾರೆಂಬುದನ್ನು ತಿಳಿದುಕೊಂಡರು. ಇಬ್ಬರು ಮಕ್ಕಳ ಮುಖಗಳನ್ನು ನೋಡಿದರು. ಡೆಹರಿ--ಓನ್--ಸೋನ್‌ದ ಹಿರಿಯ ಪೋಲೀಸ ಅಧಿಕಾರಿಗಳನ್ನು ಮತ್ತೊಂದು ಕೊಠಡಿಗೆ ಕರೆದೊಯ್ದರು. ಕಾಲುಗಂಟೆಯ ಅನಂತರ ಇಬ್ಬರೂ ಬಂದು ನನಗೆ ಎಲ್ಲರ ಎದುರು ಕೆಲವು ಸೂಚನೆಗಳನ್ನು ಕೊಟ್ಟರು:— " ಹರಪ್ರಸಾದನನ್ನು ಆತನ ತಂದೆಯ ಬಳಿಗೆ ಕರೆದೊಯ್ದು ಮೃದುವಾಗಿ ಒಪ್ಪಿಸಬೇಕು. ತಂದೆ ಮಗುವನ್ನು ಸ್ವೀಕರಿಸುವಷ್ಟು ಕಾಲ ಉಳಿದವರು ಯಾರೂ ಒಂದೂ ನುಡಿ ಪಿಟ್ಟೆನ್ನಬಾರದು. ಯಾವ ಪ್ರತಿಕ್ರಿಯೆ ಭಾವನೆಗಳನ್ನು ವ್ಯಕ್ತಪಡಿಸಬಾರದು. ತಟಸ್ಥ ಪ್ರೇಕ್ಷಕರಾಗಿರಬೇಕು. ಅನೇಕ ವರ್ಷಗಳ ಅನಂತರ ತಂದೆ ಮಗನನ್ನು ಪಡೆದಿರುವನೆಂಬುದು ನೆನಪಿರಲಿ. ಅವರ ಭಾವನೆಗಳು ಉಕ್ಕಿ ತಾನಾಗಿಯೇ ಶಾಂತವಾಗುವಷ್ಟು ಕಾಲ ತಡೆದುಕೊಳ್ಳುವ ತಾಳ್ಮೆ ನಿಮ್ಮೆಲ್ಲರಲ್ಲಿರಲಿ. ತದನಂತರ ಇದೇ ರೀತಿ ಸುಂದರಾಳನ್ನು ಅವಳ ಅಣ್ಣನಿಗೆ ನೀವು ನಿಮ್ಮ ಅಧಿಕಾರಿಣಿಯು ಕೂಡಿ ಒಪ್ಪಿಸಬೇಕು. ಸಮರ್ಥನು ಹಿಂಬದಿಯಲ್ಲಿ ನಿಂತು ಮುಂದಿನ ಸೂಚನೆಗಳಿಗೆ ಕಾಯಬೇಕು. "

ಮುಖ್ಯ ವೈದ್ಯರ ಮತ್ತು ಹಿರಿಯ ಪೋಲೀಸ ಅಧಿಕಾರಿಗಳ ಸೂಚನೆಯಂತೆ ನಡೆದುಕೊಳ್ಳುವದಾಗಿ ನಾನು ಭರವಸೆಯಿತ್ತೆನು. ನಾವೆಲ್ಲರೂ ಸಾವಕಾಶವಾಗಿ ಹರಪ್ರಸಾದನ ತಂದೆಯ ಕೋಠಡಿಯತ್ತ ತೆರಳಿದೆವು. ಬಾಗಿಲಲ್ಲಿ ನಿಂತಿದ್ದ ಸೇವಕ ಎಲ್ಲರನ್ನೂ ಒಳಗೆ ಕರೆದೊಯ್ದನು. ಮುಖ್ಯ ವೈದ್ಯರು ಮುಂದೆ ಹೋಗಿ, ನಾವು ಮುಖರ್ಜಿಯವರನ್ನು ಕಾಣಲು ಬಂದಿರುವದಾಗಿ ತಿಳಿಸಿದರು. ಮಲಗಿದವರು ಸ್ವಲ್ಪ ಮೇಲೆ ಸರಿದು ತಲೆದಿಂಬಿಗೆ ಒರಗಿ

ಕುಳಿತರು. ನಾನು ಮುಂದೆ ಹೋಗಿ ನನ್ನ ಹೆಸರು ದೆಸೆಗಳನ್ನು ತಿಳಿಸಿದೆನು. ಅವರಿಗಾಗಿ ಒಂದು ಅಮೂಲ್ಯ ಕಾಣಿಕೆಯನ್ನು ತಂದಿರುವದಾಗಿ ಹೇಳಿ "ಇದೋ ಸ್ವೀಕರಿಸಿರಿ ! ನಿಮ್ಮ ಪ್ರೇಮದ ಪುತ್ರ ಹರಪ್ರಸಾದನನ್ನು ನಿಮಗೆ ಒಪ್ಪಿಸುತ್ತಿದ್ದೇವೆ ! " ಎಂದೆನು. ನನ್ನ ಬದಿಗೇ ನಿಂತಿದ್ದ ಹರಪ್ರಸಾದನನ್ನು ಎರಡೇ ಎರಡು ಕ್ಷಣ ತಂದೆ ನಿರೀಕ್ಷಿಸಿದನು. ತಂದೆ ಮಗನ ಸಾಮ್ಯ ಅಪ ರೂಪವಾಗಿತ್ತು. ಗುರುತಿಸಲು ಇಬ್ಬರಿಗೂ ಎಷ್ಟೂ ಸಮಯ ತಾಗಲಿಲ್ಲ. ಮಗನು ಮುಂದೆ ಬಿದ್ದು ತಂದೆಯ ಪಾದಗಳಲ್ಲಿ ವಂದಿಸಲು ಮುಗಿಬಿದ್ದರೆ ತಂದೆ ಮಗನನ್ನು ಅಪ್ಪಿ ಮುದ್ದಾಡಲು ಹೋರಾಡಿದನು. ಅಬ್ಬಾ ! ಮಾನವರ ಈ ವಾತ್ಸಲ್ಯದ ಅಪೂರ್ವ ದೃಶ್ಯವು ನಮ್ಮ ಕಣ್ಣುಗಳಲ್ಲಿ ಅಶ್ರುಗಳನ್ನು ತುಂಬಿಸಿ ನಿಲ್ಲಿಸಿತ್ತು. ಸ್ವಲ್ಪ ದ್ರವಿಸಿದರೆ ಮಾತಿಗೆ ತಪ್ಪುವೆವು. ಮಗನ ಅಂಗಾಂಗಗಳನ್ನೆಲ್ಲ ನ್ಯೆದಡವಿ, ನೂರಾರು ಬಾರಿ ಹಣೆಗೆ ಮುದ್ದಿಟ್ಟು ಕೊನೆಗೆ ಮಗನ ಕಣ್ಣುಗಳಲ್ಲಿ ಕಣ್ಣಿಟ್ಟು ಸಣ್ಣ ಮಕ್ಕಳಂತೆ ದುಃಖಿಸಹತ್ತಿದ ತಂದೆ ಒಂದು ಪಾಲಾದರೆ, ಮಗನು ಹತ್ತುಪಾಲು ದುಃಖದಿಂದ ಮುಳು ಮುಳು ಶಬ್ದವಿಲ್ಲದೆ ಉಮ್ಮಳಿಸಹತ್ತಿದನು. ದುಃಖ ತುಟ್ಟತುದಿಯನ್ನೇರಿತು. ಮುಖ್ಯ ವೈದ್ಯರು ಕಣ್ಸನ್ನೆ ಮಾಡಿದರು. ಸೇವಕ ಒಳಗಿನ ಇನ್ನೊಂದು ಕೊಠಡಿಯ ಬಾಗಿಲು ತೆರೆದನು. ಒಬ್ಬ ಹೆಣ್ಣುಮಗಳು ತನ್ನ ಎರಡು ಚಿಕ್ಕ ಮಕ್ಕಳೊಡನೆ ಹಣ್ಣುಗಳನ್ನು ಬೆಳ್ಳಿಯ ತಟ್ಟೆಯಲ್ಲಿಡುತ್ತ ಅಲ್ಲಿ ಕುಳಿತಿದ್ದಳು. ಬಾಗಿಲು ತೆರೆದಾಗ, ಇಲ್ಲಿ ಕೂಡಿದ ಜನರನ್ನು ತಂದೆ-ಮಗನ ದೃಶ್ಯವನ್ನು ಕಂಡು, ಮಕ್ಕಳನ್ನು ತಟ್ಟನೆ ಬದಿಗಿರಿಸಿ, ಹೊರಗೆ ಬಂದು, ಒಂದೇ ಒಂದು ಕ್ಷಣ ಹರಪ್ರಸಾದನನ್ನು ನೋಡಿ, ಪತಿಯ ಕಡೆಗೊಮ್ಮೆ ನೋಡಿ, "ಹರಪ್ರಸಾದ ! ಮಗನೇ ! ಅಯ್ಯೋ ದೇವರೇ ! " ಎನ್ನುತ್ತ ಮಗನನ್ನು ಅರ್ಧ ಎತ್ತಿ ಎಳೆದು ಸೆಳೆದು ಅಪ್ಪಿಕೊಂಡು ತನ್ನ ಒಳಗಿನ ಕೊಠಡಿಗೆ ಕರೆದೊಯ್ದು ಬಾಗಿಲು ಮುಚ್ಚಿಕೊಂಡಳು. ತಾಯಿಯ ವಾತ್ಸಲ್ಯ ತಾಯಿಗೇ ಗೊತ್ತು. ತಂದೆಯು ಇಷ್ಟಾರ್ಥ ಸಿದ್ಧಿಯಾದ ಪುರುಷನ ತೃಪ್ತ ಗಂಭೀರ ಭಾವದಿಂದ ಶಾಂತನಾದನು. ಆ ಮೇಲೆ ಪುನಃ ಕಾಣುವದಾಗಿ ಆತನಿಗೆ ಹೇಳಿ, ನಾವು ಹೊರಗೆ ಬಂದೆವು.

ನಾವು ಸುಂದರಾಳೊಂದಿಗೆ ಅವಳ ಅಣ್ಣನ ಕೊಠಡಿಗೆ ಹೋದಾಗ ಅವಳ ಅಣ್ಣ ಅತ್ತಿಗೆ ತಮ್ಮ ಚಿಕ್ಕ ಮಗನನ್ನು ನಡುವಿರಿಸಿಕೊಂಡು ಮಗುವಿಗೆ ಲಲ್ಲೆ ಮಾಡುತ್ತಿದ್ದರು. ಅಂದು ನಾವು ನಿಶ್ಚಿತ ಬರುವದು ಅವರಿಗೆ ತಿಳಿದಿರಲಿಲ್ಲ. ಆದರೆ ಇಂದಿಲ್ಲ ನಾಳೆ ಬರುವದು ತಿಳಿದಿತ್ತು- ಅಂತೆಯೇ ಅತ್ತಿಗೆ ಅಲ್ಲಿ ಬಂದಿದ್ದಳು. ಇಲ್ಲಿ ನಮ್ಮ ಕಾರ್ಯ ಅಷ್ಟು ಕಠಿಣವಿರಲಿಲ್ಲ. ಸುಂದರಾಳನ್ನು ನಾವು ಒಪ್ಪಿಸುವ ಪ್ರಶ್ನೆಯೇ ಉಳಿಯಲಿಲ್ಲ. ಅತ್ತಿಗೆಯೇ ಅವಳನ್ನು ಗುರುತಿಸಿ ಅವಳ ಅಣ್ಣನ ಬಳಿ ಕರೆದೊಯ್ದಳು. ಅಣ್ಣನು ತಪ್ಪಿತಸ್ಥನಂತೆ ಮುಖವನ್ನೆತ್ತಲಿಲ್ಲ. ತಂಗಿಯು ಬಾಗಿ ಅಣ್ಣನ ಪಾದಗಳಿಗೆ ವಂದಿಸಲು ಯತ್ನಿಸಿದಾಗ ಸಿರಿವಂತ ಅಣ್ಣನು ಪೌರುಷದಲ್ಲಿ ಕಡುಬಡವನಾಗಿ ತಂಗಿಗೆ ಒಂದೇ ಒಂದು ಮಾತು ಆಡಲು ಶಕ್ತನಾದನು. "ತಂಗೀ" ! ಎನ್ನುವಾಗಲೇ ಸಂಪೂರ್ಣ ಕ್ಷಮಾಯಾಚನೆಯ ದೀರ್ಘ ಬೇಡಿಕೆಯು ಆ ಶಬ್ದದಲ್ಲಿ ತುಂಬಿತ್ತು. ಅಣ್ಣನ ಈ ವಿಧದ ಭಾವನೆ ತಂಗಿಗೆ ಸ್ವೀಕರಿಸಲು ಸಾಧ್ಯವೇ? ಎಷ್ಟಾದರೂ ಅಣ್ಣ. ಅಣ್ಣನು ತಂಗಿಗೆ ಪ್ರತ್ಯಕ್ಷ ಯಾವ ಅನ್ಯಾಯವನ್ನೂ ಮಾಡಿಲ್ಲ. ಕಾಕತಾಳೀಯ ನ್ಯಾಯದಿಂದ ತಂಗಿಗೆ ಅನ್ಯಾಯವಾಗಿದೆ. ಪರಿಣಾಮದಲ್ಲಿ ದೇವರ ಕೃಪೆಯಿಂದ ತಂಗಿಯು ತನ್ನವರನ್ನು ಕೂಡಿಕೊಂಡಳು. ಎಂಬ ಭಾವನೆಯು ತಂಗಿಯ ಮುಖ ಮುದ್ರೆಯಲ್ಲಿ ಮೂಡಿತು. ಅತ್ತಿಗೆಯು ಈ ಪ್ರತಿಕ್ರಿಯೆಯನ್ನೇ ಕಾಯುತ್ತಿದ್ದಳೆಂದು ಕಾಣುತ್ತದೆ. "ಸುಂದರಾ" ! ಎಂದು ತನ್ನತ್ತ ಕರೆದಳು. " ಮಾಯೀ! " ಎಂದವಳೇ ಸುಂದರಾ ಅತ್ತಿಗೆಯ ಮೊಣಕಾಲುಗಳಲ್ಲಿ ಮುಖವನ್ನಿಟ್ಟು ದುಃಖಿಸಹತ್ತಿದಳು. ಅಣ್ಣನು ಮೇಲೆದ್ದು ಸಾವಕಾಶವಾಗಿ ಅವರನ್ನು ಒಳಗಿನ ಕೊಠಡಿಗೆ ಕಳಿಸಿದನು. ನಮ್ಮಲ್ಲಿ ಯಾರನ್ನೋ ಒಬ್ಬರನ್ನು ಕಾಣಲು ತವಕಿಸಿ, ಹಿಂದೆಮುಂದೆ ನೋಡಿದನು. ಮುಖ್ಯ ವೈದ್ಯರು, "ಧನಪಾಲ! ನಿನ್ನ ವಸ್ತು ನಿನಗೆ ಮುಟ್ಟಿತು. ಇನ್ನು ಏನಾದರೂ ಇವರು ತುಂಬಿಕೊಡಬೇಕೇ ? " ಎಂದರು. ಆಗ ಅಣ್ಣ ಧನಪಾಲನು "ಅಹುದಹುದು! ನನಗೆ ನಮ್ಮ ಗ್ರಾಮದ ದೇವಮಂದಿರದ ಪೂಜಾರಿಗಳನ್ನು ಇಲ್ಲಿ ಕಾಣಬಹುದೇನೋ ಎಂಬ ಆತುರವಾಗಿದೆ. " ಎಂದನು. ವೈದ್ಯರೂ ಅಧಿಕಾರಿಗಳೂ ನನ್ನನ್ನು ನೋಡಿದರು. ಆಗ ನಾನು "ಶ್ರೀಮಂತರೇ" !.......... ಎನ್ನುವಷ್ಟರಲ್ಲಿ, ಅಣ್ಣ ಧನಪಾಲ "ನಾನು ಈಗ ಶ್ರೀಮಂತನಲ್ಲ. ನೀವೇ

ಶ್ರೀಮಂತರು. ನಿಮ್ಮ ಹೃದಯದ ಶ್ರೀಮಂತಿಕೆಗೆ ನಾನು ಶರಣು ಶರಣು ಎನ್ನುತ್ತಿದ್ದೇನೆ. ಹಾಂ ! ಅದೇನೋ ತಾವು ಹೇಳುತ್ತಿದ್ದಿರಿ. ಮುಂದೆ ಹೇಳಿರಿ" ಎಂದನು. ನಾನು ಮುಂದುವರಿದು "ಧನಪಾಲ ಅವರೇ ! ಇಗೋ ಇಲ್ಲಿರುವವ ನಿಮ್ಮ ಮಂದಿರದ ಪೂಜಾರಿ, ಸಮರ್ಥ ! ಇವರು ನಿಮ್ಮ ತಂಗಿಯನ್ನು ರಕ್ಷಿಸಿದ್ದಾರೆ- ಇವರು ಎಷ್ಟೂ ತಪ್ಪಿತಸ್ಥರಲ್ಲ. ಇವರು ನಿಮ್ಮ ತಂಗಿಯ ಬಂಗಾವಲಿನಲ್ಲಿ........! " ಎನ್ನುತ್ತಿದ್ದಂತೆಯೇ, ಧನಪಾಲ "ಸತ್ಯ ! ಸತ್ಯ ! ನನ್ನ ಕೈಹಿಡಿದವಳು ನನಗೆ ಇದೆಲ್ಲವನ್ನೂ ಮನವರಿಕೆ ಮಾಡಿಕೊಟ್ಟು ನನ್ನ ತಪ್ಪಿಗೆ ಒಂದು ಪ್ರಾಯಶ್ಚಿತ್ತವನ್ನು ಸೂಚಿಸಿದ್ದಾಳೆ. ನನ್ನ ಚಿತ್ರವು ಈಗ ಪ್ರಾಯಕ್ಕೆ ಬಂದಿದೆ- ಸಮರ್ಥ ನನ್ನನ್ನು........" ಎನ್ನುವಷ್ಟರಲ್ಲಿ, ಸಮರ್ಥ ನಡುವೆ ಬಂದನು: "ಧನಪಾಲಜಿ ! ಯಾರು ಯಾರನ್ನೂ ಕ್ಷಮಿಸುವದು ಅವಶ್ಯವಿಲ್ಲ. ಈಶ್ವರೀ ಇಚ್ಛೆಗೆ ನಾವೆಲ್ಲರೂ ಅಂಕಿತರಾಗಿರಬೇಕು. ಮಹಾ ತಾಯಿ ಉಮಾದೇವಿ ನಿಮ್ಮ ಕೈಹಿಡಿದು ನಿಮ್ಮನ್ನೂ ನಮ್ಮನ್ನೂ ಎಲ್ಲರನ್ನೂ ರಕ್ಷಿಸಿದ್ದಾಳೆ. ಅವರಿಗೆ ನನ್ನ ಅನಂತ ನಮಸ್ಕಾರಗಳನ್ನು ಮುಟ್ಟಿಸಿದರೆ ನನ್ನ ಕರ್ತವ್ಯ ಕೊನೆಗೊಳ್ಳುವದು. ಈ ಅಧಿಕಾರಿಗಳೆಲ್ಲರೂ ಅನುಮತಿ ಕೊಟ್ಟರೆ, ಇಂದೇ ನಾನು ನನ್ನ ತಂಗಿಯನ್ನು ಕಾಣಲು ಹೊರಡಲು ಸಾಧ್ಯವಾಗುವದು. ಇದೆಲ್ಲದಕ್ಕೂ ದೇವರ ಕೃಪೆಬೇಕು ! "

ಸಮರ್ಥನ ಮಾತುಗಳು ಮುಗಿದಿರಲಿಲ್ಲ. ಸುಂದರಾಳು ಅವಳ ಅತ್ತಿಗೆ ಯೊಂದಿಗೆ ಹೊರಗೆ ಬಂದು ಅತ್ತಿಗೆಗೆ ನಮ್ಮ ಅಧಿಕಾರಿಣಿ ಪೋಲೀಸ ಸಹಾ ಯಕ ವರ್ಗದ ಮಹಿಳೆ ಇವರ ಪರಿಚಯ ಮಾಡಿಕೊಟ್ಟಳು. ಅತ್ತಿಗೆಯು ಮಕ್ಕಳನ್ನು ತಾನು ಕರೆದುಕೊಂಡು ಬದಿಗೆ ಕುಳಿತಳು. ಅಷ್ಟರಲ್ಲಿ ನಾವು ಧನಪಾಲರ ಇಚ್ಛೆಯಂತೆ ಕುಳಿತಿದ್ದೆವು. ಶ್ರೀಮತಿ ಉಮಾದೇವಿಯು ಪತಿಯ ಬಳಿ ಕುಳಿತಳು.

ಎಲ್ಲರಿಗೂ ಬಿಸಿ ಪಾನೀಯ ಅಲ್ಪ ಉಪಹಾರ ಬಂದವು. ಜೊತೆಗೆ ಹರಪ್ರಸಾದನ ಆಮಂತ್ರಣವೂ ಬಂದಿತು. ಇಲ್ಲಿ ಮುಗಿಸಿ, ಅಲ್ಲಿಯ ಉಪ ಚಾರವನ್ನೂ ಸ್ವೀಕರಿಸಿ, ನಾವು ಮುಂದಿನ ವ್ಯವಸ್ಥೆಗೆ ಹೊರಡುವದಾಗಿ

ತಿಳಿಸಿದೆವು. ಅವಶ್ಯ ಕಾಗದ ಪತ್ರಗಳನ್ನು ಅನಂತರ ಬಂದು ಸರಿಪಡಿಸಿಕೊಳ್ಳುವದಾಗಿ ಹೇಳಿದೆವು. ಇದಾವುದಕ್ಕೂ ಎರಡೂ ಬಳಗಗಳು ಒಪ್ಪಲಿಲ್ಲ.

## ೨೯

ಇಲ್ಲಿ ಕೂಡಿರುವ ಎಲ್ಲ ಅಧಿಕಾರಿಗಳು ಅವರ ಸಹಾಯಕರು ಇಂದು ಇಬ್ಬರು ಪಾಲಕರ ಅತಿಥಿಗಳಾಗಿ ಅವರ ಬಳಗದೊಂದಿಗೆ ಭೋಜನ ಮಾಡಬೇಕು. ತದನಂತರ "ಡೆಹರಿ-ಓನ್-ಸೋನ್" ಅಧಿಕಾರಿಗಳು ತಮ್ಮ ಕಾರ್ಯಕ್ಕೆ ಹೋಗಬಹುದು. ದಕ್ಷಿಣ ದೇಶದಿಂದ ಬಂದ ಆರು ಜನರು, ಈ ಪಾಲಕರು ಅವರಿಗಾಗಿ ಗೊತ್ತುಪಡಿಸುವ ೩—೪ ದಿನಗಳ ಕಾರ್ಯಕ್ರಮದಂತೆ ಉತ್ತರದ ಪಾಲಕರ ಬಳಗದೊಡನೆ ಇರಬೇಕು. ಅಂದರೆ ಕೆಲವು ಪಾಲಿನಷ್ಟಾದರೂ ಉಪಕೃತಿಯ ಋಣದಿಂದ ಪಾಲಕರು ಮುಕ್ತರಾಗುವರು; ಎಂಬುದೇ ಆ ಬಳಗಗಳ ವಾದವಾಗಿತ್ತು. ಈ ಆತಿಥೇಯದಲ್ಲಿ ಅವರು ಯಜಮಾನರು ನಾವು ಅತಿಥಿಗಳು. ನಾವು ಲೋಕ ರೂಢಿಗೆ ತಲೆಬಾಗಿ ಅವರ ಕಾರ್ಯಕ್ರಮಕ್ಕೆ ಒಪ್ಪಿಕೊಂಡೆವು.

ಹರಪ್ರಸಾದ, ಸುಂದರಾ ಯಜಮಾನರ ಗುಂಪಿಗೆ ಸ್ವತಂತ್ರರಾಗಿ ಸೇರಿದರು. ಸಮರ್ಥನು ನಮ್ಮೊಡನೆ ಉಳಿದನು. ನಮಗೆ ಬೀಳ್ಕೊಡುವ ಹಾದಿಯೇ ಅವನಿಗೆ ಸಿಗಲಿಲ್ಲ. ನೈತಿಕ ದಿಗ್ಬಂಧನವು ಎಷ್ಟೊಂದು ವಿಪರೀತಕ್ಕೆ ಒಬ್ಬನನ್ನು ಗುರಿಮಾಡುತ್ತದೆಂಬುದಕ್ಕೆ ಅಂದಿನ ಸಮರ್ಥನೇ ಸಾಕ್ಷಿ. ಕೊನೆಗೆ ನಾನೇ ಬಾಯಿಬಿಟ್ಟು ಹೇಳಬೇಕಾಯಿತು: " ಸಮರ್ಥ ! ನೀನು ಬಹಳ ಧರ್ಮಸಂಕಟದಲ್ಲಿರುವಿ. ನಿನಗೆ ಸುಂದರಾಳ ಬಿಕ್ಕಟ್ಟು ಇಲ್ಲಿ ಬಿಡಿಸೀತೆಂದು ಕನಸು-ಮನಸ್ಸಿನಲ್ಲಿ ಇರಲಿಲ್ಲ. ಕೋಟದ್ವಾರ ಎಲ್ಲಿ ? ಡೆಹರಿ-ಓನ್-ಸೋನ್ ಎಲ್ಲಿ ? ೫೦೦ ಮೈಲುಗಳಷ್ಟು ಹೆಚ್ಚು ಕಡಿಮೆ ಅಂತರ. ಇವಳ

ಅಣ್ಣ ಅತ್ತಿಗೆ ಇಲ್ಲಿಗೆ ಹೇಗೆ ಬಂದರು. ? ನಿನ್ನ ತಂಗಿಯನ್ನು ಕಾಣುವದಾದರೆ ಎರಡು ದಿನ ಬಿಟ್ಟೊ ಬಿಡದೆ ಪ್ರವಾಸ ಮಾಡಬೇಕು. ದಕ್ಷಿಣದ ಈ ಜನರಿಂದ ನಿನ್ನ ಊರಿಗೆ ಹೊರಡಲು ಅನುಮತಿ ಹೇಗೆ ಕೇಳಬೇಕು ? ಇದಲ್ಲವೆ ನಿನ್ನ ಅಂತರಂಗದ ಹೊಯ್ದಾಟ ? ''

'' ಅಹುದು ! ಅಹುದು ! ನನ್ನ ಮನಸ್ಸು ನೀವು ಸರಿಯಾಗಿ ತಿಳಿದಿರುವಿರಿ ! ನಿಮ್ಮ ಮಾತಿನಂತೆ ಇನ್ನು ಮುಂದೆಯೂ ನಡೆಯುವೆನು. ದಯವಿಟ್ಟು ನನಗೆ ದಾರಿ ತೋರಿಸಿರಿ" ಎಂದನು ಸಮರ್ಥ.

'' ನಮ್ಮೊಡನೆ ಇಂದು ಪೂರ್ಣ ಉಳಿದು ಪ್ರವಾಸದ ದಣಿವು ಹಿಂಗಿಸಿಕೋ. ನಾಳೆ ಮುಂಜಾನೆ ನಿರ್ಧರಿಸಿ ನಾವೂ ನೀನೂ ಅತ್ತ ಇತ್ತ ಹೊರಟರಾಯಿತು'' ಎಂದಾಗ ಅವನು ಒಪ್ಪಿ, ತಾನು 'ಇಲ್ಲಿ ಯಾವ ರೀತಿ ನೆರವು ಮಾಡುವವೆಂದು ಹುಡುಕಿದನು. ನಮ್ಮ ಸಹಾಯಕನು ಅಷ್ಟರಲ್ಲಿ ಆ ಇಬ್ಬರು ಮಕ್ಕಳ ವಸ್ತುಗಳನ್ನೆಲ್ಲ ಸಂಬಂಧಿಸಿದವರಿಗೆ ಒಪ್ಪಿಸಿ, ನಮ್ಮ ವಿಶ್ರಾಂತಿಯ ವಸತಿ ಗೃಹವನ್ನು ನೋಡಿಕೊಂಡು ಬಂದಿದ್ದನು. ನಮಗಾಗಿ ಎರಡು ಶ್ರೀಮಂತ ವಾಹನಗಳು ಅಣಿಯಾಗಿ ನಿಂತಿದ್ದವು. ನಮಗೆ ಕರೆಯೂ ಬಂದಿತು. ಪೋಲೀಸ ವಾಹನ ತನ್ನ ಕಾರ್ಯಾಲಯಕ್ಕೆ ಹೋಗಿತ್ತು. ಡೆಹರಿಯ ಮತ್ತು ನಮ್ಮಲ್ಲಿಯ ಅಧಿಕಾರಿಗಳೊಡನೆ ನಾವೆಲ್ಲರೂ ಆ ಪಾಲಕರ ಮುಂದಿನ ಅನುಮತಿ ಕೇಳಿದೆವು ಹೆಣ್ಣುಮಕ್ಕಳು ತಮ್ಮ ಮಕ್ಕಳೊಡನೆ ಆಗಲೇ ನಮ್ಮ ವಸತಿಗೃಹಕ್ಕೆ ಹೋಗಿದ್ದರು. ಹಿರಿಯ ವೈದ್ಯರು, ಮುಖರ್ಜಿ ಮತ್ತು ಧನಪಾಲ ಮಾತ್ರ ಇಲ್ಲಿ ಇದ್ದರು. ತಾವು ಮೂವರು ಹಿಂದಿನಿಂದ ಇಳಿಹೊತ್ತಿನಲ್ಲಿ ಬಂದು ಅಲ್ಲಿ ಕೂಡಿಕೊಳ್ಳುವದಾಗಿ ಹೇಳಿದರು. ನಾವು ವಾಹನಗಳಲ್ಲಿ ಹೋಗಿ ವಿಶ್ರಾಂತಿ ಪಡೆಯಬೇಕೆಂದರು. ಉಳಿದ ಯಾವದೇ ಮಾತನ್ನು ನಾಳೆ ಮುಂಜಾನೆ ವಿರಾಮವಾಗಿ ಮಾತನಾಡಬಹುದೆಂದರು. ನಾವು ವಾಹನಗಳನ್ನೇರಿ ವಸತಿ ಗೃಹಕ್ಕೆ ಹೋದೆವು. ಹರಪ್ರಸಾದ ಸುಂದರಾ ದ್ವಾರದಲ್ಲಿ ನಿಂತಿದ್ದರು. ನಮ್ಮನ್ನು ಸ್ವಾಗತಿಸಿದರು. ಒಬ್ಬರನ್ನು ಮಾತ್ರ ಮುಂಗೈ

ಹಿಡಿದೆಳೆದು ಹರಪ್ರಸಾದ ಹುಬ್ಬುಗಳನ್ನು ಕುಣಿಸಿ ಮಾತಾಡಿದನು: "ಸಮರ್ಥಜಿ! ತಾವು ಅತಿಥಿಗಳಲ್ಲ. ನಮ್ಮ ಕಡೆಯವರು. ಅತಿಥಿಗಳ ಸತ್ಕಾರವನ್ನು ನಿಮ್ಮನ್ನು ಕೂಡಿಕೊಂಡೇ ನಾವು ಯಶಸ್ವಿಯಾಗಿ ಮಾಡಲು ನಮ್ಮ ಚಿಕ್ಕಪ್ಪ! ಹಾಂ! ಹಾಂ! ನಮ್ಮ ಚಿಕ್ಕಪ್ಪ! ಇವರ! ಸುಂದರಾಜಿಯವರ! ಪೂವಂದಿರು! ಹಾಂ! ಹಾಂ! ಮಾಯಿ ಉಮಾಜಿಯವರ ಚಿಕ್ಕಪ್ಪ! ಹಾಂ! ಹಾಂ! ಹಿರಿಯ ವೈದ್ಯರು! ನಿಮಗೆ ಶುಶ್ರೂಷಾಲಯದಿಂದ ಇಲ್ಲಿಗೆ ಕಳಿಸಿರುವರಲ್ಲ! ಅವರೇ ಅವರು! ಹೇಳಿದ್ದಾರೆ ಬನ್ನಿರಿ!"

"ಡೆಹರಿ-ಓನ್-ಸೋನ್‌ದಲ್ಲಿ ಡೆಹರಾಡೂನ್ ಎಕ್ಸಪ್ರೆಸ್ ಹಾಯ್ದು ಹೋದಂತಾಯಿತು. ನಮ್ಮ ಮಿದುಳಿನಲ್ಲಿಯೂ ವಿದ್ಯುತ್ ಸಂಚಾರವಾಯಿತು. ಭಲೆ! ಭಲೆ! ಹರಪ್ರಸಾದ! ದೇವರ ಲೀಲೆಯು ಅಗಾಧವಾದುದು. ಕರೆದುಕೋ ನಿನ್ನ ಕಡೆಯ ಸಮರ್ಥ ಮಹಾಶಯನನ್ನು! ಎಂದು ನಾನು ಸಮರ್ಥನನ್ನು ನಯವಾಗಿ ಅವರೆಡೆ ನೂಕಿದೆನು. ಪಾಪ! ಬಡಪ್ರಾಣಿ! ಕಣ್ಣು ಬಿಡುತ್ತ ನಮ್ಮ ಮುಂದಿನ ನಭೋವಾಣಿಯನ್ನು ಕಾಯುತ್ತ ನಿಂತಂತ್ತಿತ್ತು. ರಾಮಬಾಣವನ್ನು ಬಿಟ್ಟೆನು:

"ಸಮರ್ಥ! ಉಮಾಮಾಯಿಯವರಿಗೆ ಹೇಳಿ ನೀನು ಮುಂದಿನ ಪ್ರವಾಸಕ್ಕೆ ಅಣಿಯಾಗು. ದೇವರು ನಿಜವಾಗಿಯೂ ನಿನ್ನನ್ನು ರಕ್ಷಿಸಿದ್ದಾನೆ. ನಾನೂ ನೀವೂ ಯಾವ ಚಿಂತೆಯನ್ನೂ ಮಾಡಬೇಕಾಗಿಲ್ಲ. ನಮಗೆ ಈಗ ನಮ್ಮ ಸ್ನಾನ, ಊಟ, ವಿಶ್ರಾಂತಿಯ ಚಿಂತೆ ಮಾತ್ರ ಉಳಿದಿದೆ. ಅದನ್ನು ನೀನೂ ಕೂಡಿ ಮಾಡಲು ಆಜ್ಞೆಯಾಗಿದೆ. ನಡೆಯಲಿ!"

ನಾವೆಲ್ಲರೂ ಒಳಗೆ ಹೋದೆವು. ಕಾಲು ಗಂಟೆ ಮಾತ್ರ ಸಮರ್ಥ ಹರಪ್ರಸಾದನೊಡನೆ ಅಂತಃಪುರವನ್ನು ಸೇರಿ, ಒಬ್ಬನೇ ಹೊರಗೆ ಬಂದು, ಒಬ್ಬೊಬ್ಬರನ್ನು ಸ್ನಾನಕ್ಕೆ ಕರೆದೊಯ್ದನು. ಹೆಣ್ಣುಮಕ್ಕಳ ಮೇಲ್ವಿಚಾರಣೆ ಸುಂದರಾಳು ಒಬ್ಬ ಪರಿಚಾರಿಕೆಯನ್ನು ಕರೆದುಕೊಂಡು ಮುಗಿಸಿದಳು. ಸಾಮೂಹಿಕ ಭೋಜನ ಸಾವಕಾಶವಾಗಿ ಒಂದು ಗಂಟೆ ನಡೆಯಿತು. ನಮ್ಮ ಸಹಾ

ಯಕರಿಗೂ ನಮ್ಮೊಡನೆ ತಾರತಮ್ಯವಿಲ್ಲದೇ ಸತ್ಕಾರ ದೊರೆವಂತೆ ಸಮರ್ಥ ಹರಪ್ರಸಾದ ಸುಂದರಾ ನೋಡಿಕೊಂಡರು. ನಮ್ಮೆಲ್ಲರನ್ನೂ ವಿಶ್ರಾಂತಿಯ ಕೊಠಡಿಗೆ ಕಳುಹಿಸಿ, ಮೂವರು ತಮ್ಮ ಹಸಿವು ಹಿಂಗಿಸಲು ಒಳಗೆ ಹೋದರು. ಒಂದು ಗಂಟೆ ನಮ್ಮೊಡನೆ ಮಾತುಕತೆ ನಡೆಸಿ, ನಾವು ಅರೆಸಿದ್ದೆಯಲ್ಲಿ ತಪ್ಪು ತೊದಲು ನುಡಿಯುವದನ್ನು ಕಂಡು, ಡೆಹರಿ-ಓನ್-ಸೋನ್ ಅಧಿಕಾರಿಗಳು ತಮ್ಮ ನಿವಾಸಗಳಿಗೆ ಹೊರಟರು. ನಾಳೆ ಮುಂಜಾನೆ ಕೂಡುವದಾಗಿ ಹೇಳಿದರು. ಈಗ ನಾವೇ ನಾವು ! ಆರು ಜನ ದಾಕ್ಷಿಣಾತ್ಯರು ! ನಮ್ಮ ಅಚ್ಚ ಕನ್ನಡದಲ್ಲಿ ಸರಳವಾಗಿ ಹತ್ತು ನಿಮಿಷ ನಾಲಿಗೆಯ ಚಾಪಲ್ಯವನ್ನು ತೀರಿಸಿಕೊಂಡು ನಿದ್ರೆಯ ವಶರಾದೆವು.

## ೩೦

ನಾವು ಎಚ್ಚತ್ತಾಗ ಸಂಜೆ ಐದು ಗಂಟೆಯಾಗಿತ್ತು. ಹಗಲು ಮಲಗುವ ರೂಢಿಯಿಲ್ಲದ ದುಡಿಯುವ ಜನಗಳಾದ ನಮಗೆ ಸತತ ಮೂರು ಗಂಟೆಯ ನಿಬಿಡ ನಿದ್ರೆಯೆಂದರೆ ಬಹುಮೂಲ್ಯದ ಶ್ರೀಮಂತಿಕೆಯ ನಡವಳಿಕೆಯಲ್ಲವೇ ? ಅದಾವುದೋ ಅಸ್ವಾಭಾವಿಕ ಕ್ರಿಯೆಯನ್ನು ಮಾಡಿದಂತಾಗಿ ನಮ್ಮ ತ್ರಿಕರಣಗಳು ಸಹಜ ಕ್ರಿಯೆಗೆ ಏಕಾಏಕೀ ಅಣಿಯಾಗಲಿಲ್ಲ. ನಾವು ಎಚ್ಚರವಾಗುವದನ್ನೇ ನಿರೀಕ್ಷಿಸುತ್ತಿದ್ದ ಹಿರಿಯ ವೈದ್ಯರನ್ನು ನಿಲ್ಲಿಸಿ ಬಹುಕಾಲ ಅವರ ಅಮೂಲ್ಯ ಕಾಲಹರಣ ಮಾಡಿದ್ದನ್ನು ತಿಳಿದು ನಾವು ಕ್ಷಮೆ ಕೇಳಿದೆವು. ("No! No! Don't worry. I have eome alone to congratulate you for your rare humanitarian work. God is with us! The children are saved, with them, their elders") " ಆದೇನಿಲ್ಲ, ಚಿಂತೆ ಬೇಡ. ನಿಮ್ಮ

ಮಾನವೀಯ ಕಾರ್ಯಕ್ಕಾಗಿ ಅಭಿನಂದನೆ ಸಲ್ಲಿಸಲು ನಾನೊಬ್ಬನೇ ಬಂದಿದ್ದೇನೆ. ದೇವರ ಕೃಪೆ ನಮ್ಮ ಮೇಲಿದೆ. ಮಕ್ಕಳನ್ನೂ ಅವರ ಹಿರಿಯರನ್ನೂ ಕಾಪಾಡಿದ್ದಾನೆ. " ಎಂದು ವೈದ್ಯರು ನಮ್ಮ ಒಬ್ಬೊಬ್ಬರ ಕೈಹಿಡಿದು ಕುಲುಕಿದರು. ತಾವು ನಮಗಾಗಿ ತಂದ ಹಣ್ಣು-ಹಂಪಲಗಳನ್ನು ತಟ್ಟೆಯಲ್ಲಿ ತರಿಸಿ, ನಮ್ಮೊಡನೆ ಕುಳಿತು ಒಪ್ಪಿಸಿ, ನಾಳೆ ಪುನಃ ಕೂಡುವದಿದೆ, ಎಂದು ಹೇಳಿ ನಮಸ್ಕರಿಸಿ ಹೋದರು. ನಿಬ್ಬರದ ಊಟ, ಅಬ್ಬರದ ನಿದ್ದೆ, ನಮಗೆ ಯಾವ ಉಪಹಾರವೂ ಒಗೆಹರಿಯದು. ಸನ್ನೆಮಾಡಿ ಬಸವಂತನಿಂದ ತಟ್ಟೆಯನ್ನು ಸಮರ್ಥನಿಗೆ ಮುಟ್ಟಿಸಲು ತಿಳಿಸಿ, ಮುಖ ಮಾರ್ಜನೆ ಮುಗಿಸಿ ಸ್ವಯಂ ಬುದ್ಧಿಯಿಂದ ಈ ಊರಿನ ಬಯಲಿನ ಬೀಡಿನ ಪರಿಚಯ ಮಾಡಿಕೊಳ್ಳಲು ಹೊರಟೆವು. ಚೊಕ್ಕ ಉಡುಪಿನಲ್ಲಿ ಸಮರ್ಥನು ಬಂದು ಕೂಡಿಕೊಂಡನು. ಅತಿಥಿಗಳಿಗೆ ಬಿಡುಗಡೆಯನ್ನು ದಯಪಾಲಿಸಿದ ಯಜಮಾನರಂತೆ, ಆ ಇಬ್ಬರು ಮಕ್ಕಳು ತಮ್ಮ ಹಿರಿಯ ಹೆಣ್ಣುಮಕ್ಕಳೊಂದಿಗೆ ವಾಹನಗಳಲ್ಲಿ ಕುಳಿತು ಕೈಬೀಸುತ್ತ, ತಾವೂ ಊರಿನ ಪರಿಚಯಕ್ಕೇ ಹೊರಟಿರುವದಾಗಿ ಸನ್ನೆಯಿಂದ ತೋರಿಸಿ, ಭರದಿಂದ ಸಾಗಿದರು.

ರಾತ್ರಿ ೯ ಗಂಟೆಗೆ ನಾವು ಮರಳಿದೆವು. ಊಟದ ಉಪಚಾರವನ್ನು ಮಾಡಿ, ಎರಡು ಗಂಟೆ ನಮ್ಮ ಊರಿನ ಈ ಊರಿನ ಸಾಮ್ಯ, ವೈಷಮ್ಯಗಳನ್ನು ಚರ್ಚೆಮಾಡಿ, ಹೊತ್ತುಗಳೆದು ಸುಖವಾಗಿ ನಿದ್ರೆ ಹೋದೆವು.

ಮರುದಿನ ಪ್ರಾತರ್ವಿಧಿಗಳನ್ನು ತೀರಿಸಿ, ನಾವೇ ಶುಶ್ರೂಷಾಲಯಕ್ಕೆ ಹೊರಡುವದೆಂದು ಹೊರಬಿದ್ದೆವು. ಎದುರಿಗೆ ಹಿರಿಯ ವೈದ್ಯರು, ಧನಪಾಲ ಮತ್ತು ಗುರುಧನ ಮುಖರ್ಜಿ ಅವರು ವಾಹನದಿಂದ ಇಳಿದು ಬಂದರು. ಅವರ ಹಿಂದೆಯೇ ಮೂರು ಸುಂದರ ವಾಹನಗಳು ಬಂದವು. ಒಂದೊಂದರಲ್ಲಿ ಒಂದು ಬಳಗ. ಮೂರನೆಯ ಬಳಗವು ನಮಗೆ ಪರಿಚಯವಿರಲಿಲ್ಲ. ಹಿರಿಯ ವೈದ್ಯರು ಮುಂದೆ ಒಂದು ಕೈನೀಡಿ ಇಂಗ್ಲೀಷಿನಲ್ಲಿ, ಆ ಬಳಗದ ಪರಿಚಯ ಮಾಡಿಕೊಟ್ಟರು: " ಇವರು ಶ್ರೀಮತಿ ಹೃದಯೇಶ್ವರಿ ಮುಖರ್ಜಿ. ಇದು ನನ್ನ ಮಗು. ದೇವರು ಇದೊಂದು ಮಗುವನ್ನು ಒಂದು ವರ್ಷದ

ಹಿಂದೆ ದಯಪಾಲಿಸಿದ್ದಾನೆ. ಮಗುವಿಗೆ ನಾಮಕರಣಮಾಡಿಲ್ಲ. ಬಹುಶಃ ಮಗುವೂ ಒಂದು ಹೃದಯದ ಹೆಸರನ್ನೇ ಪಡೆಯುವಂತಿದೆ. ನಾವೆಲ್ಲ ಹೃದಯಿಗಳೇ. we are all hearts'' ಎಂದು ವಿನೋದ ಮಾಡಿದರು. ನಾವು ಆನಂದದಿಂದ ಅವರ ಮಾತುಗಳನ್ನು ಸ್ವೀಕರಿಸುವದಾಗಿ ಹೇಳಿದೆವು "ಉಪಕೃತರು! " ಎನ್ನುತ್ತ, ಹೃದಯನಾಥ ನಮ್ಮನ್ನು ಒಳಗೆ ಕರೆದೊಯ್ದರು. ತ್ವರಿತದ ನಮಗಾಗಿ ಎರಡು ದಿನಗಳ ಕಾರ್ಯಕ್ರಮವನ್ನು ಅವರು ಈ ಸಮೂಹವನ್ನು ಕೂಡಿಸಿ ಓದಿ ಹೇಳಿದರು. ನನ್ನ ಪ್ರತಿಕ್ರಿಯೆಗೆ ಎದುರು ನೋಡಿದರು. ನನ್ನ ಒಡನಾಡಿಗಳ ಕಡೆ ನೋಡುತ್ತ [ " How can we digest this feast of sight seeing? Are we aecustomed to such things? " ] " ಈ ನಿಸರ್ಗ ಸೌಂದರ್ಯೋಪಾಸನೆಯ ಶ್ರೀಮಂತ ಭೋಜನವನ್ನು ನಾವು ಅರಗಿಸಿಕೊಳ್ಳಬಲ್ಲೆವೆ? ಇಂತಹ ವಿಷಯಗಳು ನಮಗೆ ರೂಢಿಯಾಗಿವೆಯೇ? " ಎಂದೆನು. ನಮ್ಮವರು ಅದೇ ಭಾವನೆ ವ್ಯಕ್ತಪಡಿಸಿದರು.

ಧನಪಾಲ ಮುಂದೆ ಬಂದು ನಮ್ಮ ಎದುರು ಕುಳಿತರು. '' ರೋಮ್ ಪ್ರದೇಶದಲ್ಲಿ ರೋಮ್ ನಿವಾಸಿಗಳಂತಾಗಬೇಕು '' ಎಂದು ನಮ್ಮ ಪರವಾಗಿ ಕಾರ್ಯಕ್ರಮ ಒಪ್ಪಿತವೆಂದು ತಾವೇ ಮುಂದೆ ಬಿದ್ದು ಹೇಳಿದರು. ಉಪಾಯವಿಲ್ಲದೆ ನಾವೂ ಒಪ್ಪಿದೆವು. ಕಾರ್ಯಕ್ರಮದ ಪ್ರಕಾರ ನಾವು ಎಂಟನೆಯ ದಿನ ಇಲ್ಲಿಂದ ಹೊರಡುವದು ಗೊತ್ತಾಯಿತು. ನಾವು ಇಂದು ಆರನೆಯ ದಿನದಲ್ಲಿದ್ದೇವೆ. ಇಂದು ಮುಂಜಾನೆ ೧೧—೩೦ ಗಂಟೆಗೆ ಕಾರ್ಯಕ್ರಮ ಪ್ರಾರಂಭ. ನಾಳೆ ಸಂಜೆಗೆ ೬—೩೦ ಗಂಟೆಗೆ ಮುಕ್ತಾಯ. ನಾಲ್ಕು ಶ್ರೀಮಂತ ವಾಹನಗಳು (ಅಂಬೆಸೆಡೊರ) ನಮಗಾಗಿ ಬಂದಿರುವದು ತಿಳಿದು ಹೊಂದಿಕೆಯಾಯಿತು. ಎರಡು ಗಾಡಿಗಳಲ್ಲಿ ಹೆಣ್ಣುಮಕ್ಕಳು ಸಣ್ಣಮಕ್ಕಳು! ಇನ್ನೆರಡರಲ್ಲಿ ಪುರುಷರು ಹೊರಡುವದೆಂದು ಆ ವ್ಯವಸ್ಥೆ ಮಾಡಲಾಯಿತು. ಸಮರ್ಥ ಶ್ರೀ ಧನಪಾಲ, ನಾನು, ಬಸವಂತ, ನಮ್ಮಲ್ಲಿಯ ಪೋಲೀಸ ಸಹಾಯಕ ಒಂದು ಗಾಡಿಯಲ್ಲಿ; ಶ್ರೀ ಗುರುಧನ, ಡಾ| ಹೃದಯನಾಥ, ನಮ್ಮ ಪೋಲೀಸ ಅಧಿಕಾರಿ ಇಬ್ಬರು ಶುಶ್ರೂಷಾಲಯದ ಪರಿಚಾರಕರು ಇನ್ನೊಂದು ಗಾಡಿ

ಯಲ್ಲಿ! ಹೆಣ್ಣುಮಕ್ಕಳಿಗೆ ಎರಡು ಗಾಡಿಗಳಲ್ಲಿ ಚಿಕ್ಕ ಮಕ್ಕಳೊಂದಿಗೆ ಸಾಕಷ್ಟು ಸ್ಥಳ; ಹೀಗೆ ಹೊಂದಿಸಿಕೊಂಡು ನಾವು ಪ್ರಯಾಣ ಬೆಳೆಸಿದೆವು.

ಮೊದಲನೆಯ ದರ್ಶನ ಬುದ್ಧನ ಗಯೆ. ಪವಿತ್ರ ವಾತಾವರಣದಲ್ಲಿ ಸುಂದರ ದೃಶ್ಯಗಳು ! ಸಂಜೆಗೆ ಕ್ರಾಂತಿಯ ಪಾಟಣಾ! ಇತಿಹಾಸದ ಹಲವು ಸ್ಥಳಗಳು, ರಾತ್ರಿ ಅಲ್ಲಿ ವಸತಿ. ಮರುದಿನ ನಸುಕಿನಲ್ಲಿ ವಾರಣಾಸಿಗೆ ಪ್ರಯಾಣ. ಅರ್ಧದಿನ ಅಲ್ಲಿ ಕಳೆದು, ಅಲಹಾಬಾದದಲಿ ನೆಹರೂ ನಿವಾಸದ ದರ್ಶನ ಪಡೆದು, ದಾರಿಯುದ್ದಕ್ಕೂ ಧನಪಾಲ ಅವರು ತೋರಿಸಿದ ಅನೇಕ ಸ್ಥಳಗಳನ್ನು ನೋಡಿ, ರಾತ್ರಿ ಡೆಹರಿಗೆ ಮರಳಿದೆವು. ಎರಡೂ ದಿನ ಗಂಗಾ ಸ್ನಾನ ದೊರೆಯಿತು. ಬುದ್ಧನ ಗಯೆಯಲ್ಲಿ ಡಾ| ಹೃದಯನಾಥ ಮತ್ತು ಶ್ರೀಮತಿ ಉಮಾದೇವಿಯವರೊಂದಿಗೆ ನಾನು ನ್ಯಾಯಾಧೀಶರು ಅಂತರಂಗ ದಲ್ಲಿ ಸೂಚಿಸಿದ ಆಪ್ತಾಲೋಚನೆ ಮಾಡಲು ಅವಕಾಶ ದೊರೆಯಿತು. ನನ್ನ ಕರ್ತವ್ಯವನ್ನು ಮುಗಿಸಿ ಕೃತಕೃತ್ಯನಾದೆನು. ನನ್ನ ಮುಂಬೈ ಮಿತ್ರ ರಾಮ ಚಂದ್ರನ ವಿಳಾಸವನ್ನೂ ನಮ್ಮ ನ್ಯಾಯಾಧೀಶರ ವಿಳಾಸವನ್ನೂ ನನ್ನ ಅಧಿ ಕಾರಿ ವರ್ಗದ ವಿಳಾಸವನ್ನೂ ಅವರು ಅಪೇಕ್ಷಿಸಿ ನನ್ನಿಂದ ತೆಗೆದು ಕೊಂಡರು.

ರಾತ್ರಿ ಊಟ ಮುಗಿಸಿ ಎಲ್ಲರೂ ಮಲಗಿದರು. ನನಗೆ ಅದೇಕೋ ನಿದ್ರೆಯೇ ಬರಲಿಲ್ಲ. ಗವಾಕ್ಷದಿಂದ ಕಂಡ ಸೃಷ್ಟಿಯ ಲೀಲೆಯನ್ನೇ ನೋಡುತ್ತ ರಾತ್ರಿಯನ್ನು ಕಳೆದೆನು. ನನಗೆ ನಿದ್ರೆಯ ಎಲ್ಲ ಸುಖವೂ ಈ ನಿರೀಕ್ಷಣೆಯ ಲ್ಲಿಯೇ ದೊರೆಯಿತು. ಈ ಇಬ್ಬರು ಮಕ್ಕಳನ್ನು ಸಮರ್ಥನನ್ನು ದೇವರ ಚಿತ್ತಕ್ಕೆ ಒಪ್ಪಿಸಿ ತೆರಳುವ ಎದೆಗಾರಿಕೆಯನ್ನು ಪಡೆದೆನು. ಮೋಹವು ನನ್ನಲ್ಲಿ ಈಶ್ವರೀ ಇಚ್ಛೆಯಂತೆ ದೀಕ್ಷಾಬದ್ಧನಲ್ಲಿರುವ ಶಿಷ್ಟ ಗಾಂಭೀರ್ಯದ ರೂಪ ವನ್ನು ತಳೆಯಿತು.

ನಸುಕಿನಲ್ಲಿ ಸಮರ್ಥನನ್ನು ಎಬ್ಬಿಸಿ. ಅವನು ಅಕ್ಷರಶಃ ಶ್ರೀಮತಿ ಉಮಾದೇವಿಯವರ ಇಚ್ಛಾನುಸಾರ ನಡೆದರೆ, ನಮ್ಮ ಸಂತೋಷಕ್ಕೆ ಆತನು

ಕಾರಣನಾಗುವನು, ಎಂದು ಮಾತ್ರ ಹೇಳಿ, ಇದೇ ಅವನೊಡನೆ ಕೊನೆಯ ಆಪ್ತಾಲೋಚನೆ ಎಂದು ತಿಳಿಸಿ ಉಳಿದವರನ್ನು ಕೂಡಿಕೊಂಡೆನು. ಅನಂತರ ಎಲ್ಲ ಸಿದ್ಧತೆಗಳನ್ನು ಮುಗಿಸಿ ಡಾ. ಹೃದಯನಾಥ ಅವರ ಸೂಚನೆಯಂತೆ ಎಲ್ಲ ಬಳಗದೊಡನೆ ನಾವೆಲ್ಲರೂ ಭಾವಚಿತ್ರದಲ್ಲಿ ಮೂಡಿದೆವು ಇಬ್ಬರು ಮಕ್ಕಳಿಂದ ಆರು ಜನರಿಗೆ ಕಾಣಿಕೆಗಳ ಕಟ್ಟುಗಳೂ ಬಂದವು. ಸಮರ್ಥನು ಚಪಲವೂ, ಹದನವೂ, ಹರಿತವೂ, ಮೃದುವೂ ಆದ ಒಂದು ಬೆಳ್ಳಿಯ ತ್ರಿಶೂಲವನ್ನು ಸೊಂಟದಿಂದ ಬಿಚ್ಚಿ ಹೊರತೆಗೆದನು. ಅದು ಪಟ್ಟೆಯಂತೆ ಅವನ ಸೊಂಟದಲ್ಲಿ ಸುತ್ತಿದ್ದನ್ನು ನಾವು ಇಷ್ಟು ದಿನ ಯಾರೂ ನೋಡಿರಲಿಲ್ಲ. ಅದನ್ನು ಭಕ್ತಿಯಿಂದ ಎರಡೂ ಅಂಗೈಗಳಲ್ಲಿ ಎತ್ತಿ ಹಿಡಿದು ನನ್ನ ಮುಂದೆ ಒಪ್ಪಿಸಲು ನಿಂತನು. " ನಾನು ಸ್ವೀಕರಿಸಿದ್ದೇನೆ. ನನ್ನದೆಂದು ಇದನ್ನು ನಿನ್ನ ತಂಗಿಯ ಮಗನಿಗೆ ಒಪ್ಪಿಸಿ ನನಗೆ ಪತ್ರ ಬರೆದು ತಿಳಿಸಿದರೆ, ದಕ್ಷಿಣದ ನಾವು ಆರೂ ಜನರು ನಿನ್ನ ಈ ಎಲ್ಲ ಬಳಗವನ್ನು ಕೊನೆಯ ಉಸಿರಿನಲ್ಲಿಯೂ ನೆನೆಸುತ್ತೇವೆ " ಎಂದೆನು. ನನ್ನ ವಿಳಾಸದ ಪತ್ರವನ್ನು ಅವನಿಗೆ ಕೊಟ್ಟೆನು. ತ್ರಿಶೂಲವು ತನ್ನ ಸ್ಥಳ ಸೇರಿತು.

ಎಲ್ಲರೂ ನಮ್ಮೊಡನೆ ನಿಲ್ದಾಣಕ್ಕೆ ಬಂದರು. ನಮ್ಮ ಗಂಟು ಗದಡಿಗಳ ಕೂಡ ಹೊಸ ಮೂರು ಉಪಹಾರದ ಬುಟ್ಟಿಗಳು ಉಗಿಬಂಡಿಯನ್ನೇರಿದವು. ಮಾನವಶಕ್ತಿಯ ಮಿತಿಯನ್ನರಿತ ಹಿರಿಯರೆಲ್ಲರು ಔಪಚಾರಿಕವಾಗಿ ಬೀಳ್ಕೊಡುವದನ್ನು ಮುಗಿಸಿದೆವು. ಮಮತೆಯ ಸಾಕಾರ ಮೂರ್ತಿಗಳಾದ ಹರಪ್ರಸಾದ ಸುಂದರಾ ಅವರಿಗೆ ನಾನು ಮತ್ತು ಅಧಿಕಾರಿಣಿ ಪ್ರತ್ಯೇಕ ವಿಶಿಷ್ಟ ಬೀಳ್ಕೊಡಿಗೆಯ ಅವಕಾಶವನ್ನು ನೀಡಿ, ಗಾಡಿಯನ್ನೇರಿದೆವು. ಬಾಗಿಲಲ್ಲಿ ನಿಂತಿದ್ದ ನಮ್ಮ ಮುಂಗೈಗಳನ್ನು ಮಕ್ಕಳು ಮುದ್ದಾಡಿದರು. ಗಾಡಿ ಸಾಗಿತು ನಾನು ಇಳಿದು ರಭಸದಿಂದ ಇಬ್ಬರೂ ಮಕ್ಕಳ ಹಣೆಗಳ ಮುಂಗುರುಳುಗಳನ್ನು ಮುದ್ದಿಟ್ಟು ಸಮರ್ಥನನ್ನು ಸಾವರಿಸಿ ಓಡಿ ಗಾಡಿಯನ್ನೇರಿದೆನು.



## ಮರಳಿ ಕನ್ನಡ ಭೂಮಿಗೆ.......!

ಭಾವಕಥಾಶ್ರವಣ ಮುಗಿದಿದೆ. ಬರುವವರ ಹಾದಿ ನೋಡುತ್ತಿದ್ದೇವೆ...........ಮೇಳ ಬಂದಿತು. ರಾತ್ರಿ ೧೦ ಗಂಟೆಯಾಗಿದೆ. ಅಲ್ಪ ವಿರಾಮದ ಅನಂತರ ಸರ್ವರಿಗೂ ನನ್ನ ಕಡೆಗೆ ಗಮನ ನೀಡಲು ಕೇಳಿದ್ದೇನೆ: "ಇದೋ! ಸಂಜೆಗೆ ಈ ತಂತಿ ಸಂದೇಶವು ಡಾ. ಹೃದಯನಾಥರಿಂದ ಬಂದಿದೆ– 'ಇದೇ ವೈಶಾಖ ಶುದ್ಧ ತ್ರಯೋದಶಿಯ ದಿನ ಸುಂದರಾ-ಸಮರ್ಥರ ವಿವಾಹ ನಿಶ್ಚಯ ಕಾರಣವಿದೆ. ಇಂದಿಗೆ ಸರಿಯಾಗಿ ಹದಿನೈದನೆಯ ದಿನ ಕೋಟೆ ದ್ವಾರದಲ್ಲಿ ಈ ಕಾರ್ಯ ನಡೆಯುವದು. ಅಂದೇ ಅದೇ ಸ್ಥಳದಲ್ಲಿ ಹರಪ್ರಸಾದನ ಉಪನಯನ ಕಾರ್ಯವೂ ಸಾಂಗವಾಗುವದು. ನಿಮ್ಮೆಲ್ಲರ ಶುಭಾಗಮನ ಆಶೀರ್ವಾದ ಕೋರಿದ್ದೇವೆ. ಈ ಸಂದೇಶದ ಪ್ರತಿಗಳನ್ನು ನಿಮ್ಮಲ್ಲಿಯ ನ್ಯಾಯಾಧೀಶರ ಮಂಡಲಿಗೂ ನಿರೀಕ್ಷಣಾಲಯಕ್ಕೂ ಮುಂಬಯಿ ಅನಾಥಾಶ್ರಮದ ಮೂವರು ಮಹಿಳೆಯರಿಗೂ ಕಳಿಸಲಾಗಿದೆ. ಡಾ. ಹೃದಯನಾಥ ಡೆಹರಿ--ಓನ್–ಸೋನ್. "

ಘೋಷಕರಂತೆ ರಾಮಚಂದ್ರನು ಎರಡೂ ಬಾಹುಗಳನ್ನೆತ್ತಿ ನಿಂತಿದ್ದಾನೆ: " ಮಿತ್ರರೆ! ದೈವೀಲೀಲೆ ಅಗಾಧವಾದುದು. ಸುಂದರಾ ಸಮರ್ಥರ ವಿವಾಹವು ನಿರೀಕ್ಷೆಗೆ ಮೀರಿದುದು. ದೈವೀ ಸಂಕಲ್ಪವೇ ಇದಕ್ಕೆ ಕಾರಣ. ಸ್ವಾಮಿಯು ನಿರೂಪಿಸಿದ ಭಾವಕಥೆ ಪೂರ್ಣ ಕೇಳಿದ್ದೇನೆ. ತತ್ಪೂರ್ವದಲ್ಲಿ ನಾನು ಆಗಲೇ ನಾಸ್ತಿಕ್ಯದ ಎಲ್ಲೆಯಲ್ಲಿ ಅಲೆದಾಡುತ್ತಿದ್ದೆನು. ನಿಮ್ಮ ಸ್ವಾಮಿ– ನನ್ನ ಸ್ನೇಹಿತ ನನ್ನನ್ನು ಮರಳಿ ಸತ್ಯಲೋಕಕ್ಕೆ ಗೆದ್ದು ತಂದಿದ್ದಾನೆ. ಸ್ವಾಮಿ ! ಗುರುದೇವರ ಗೀತೆಯ ಸಂದೇಶವನ್ನಷ್ಟು ಓದಿ ಬಿಡು ! ನಿನ್ನ ವಿಜಯಕ್ಕೆ ಭದ್ರ ಮುದ್ರೆಯನ್ನೊತ್ತು. "

ರಾಮಚಂದ್ರನ ಜೊತೆಗೆ ನಮ್ಮವರಂತೂ ಮೂಕರಾಗಿ ನನ್ನನ್ನೇ ವಿಸ್ಮಯದಿಂದ ನೋಡಹತ್ತಿದ್ದಾರೆ. ಸೂತ್ರಧಾರಿ ಯಾರು ? ಎಂದು ಅನ್ನುತ್ತಿದ್ದಾರೆ.

" ವಿವಾಹದ ಸೂಚನೆಯನ್ನು ಸಮಯಾನುಸಾರ ಬಂಧುಗಳಿಗೆ ಮಾಡು ವದೆಂದು ನ್ಯಾಯಾಧೀಶರೂ ನಾನೂ ಒಟ್ಟಿನಲ್ಲಿ ನಿರ್ಣಯಿಸಿದ್ದು ನಿಜ. ಆದರೆ ಆಗ್ರಹವಾವುದೂ ಇದಿಲ್ಲ. ಸ್ವಾಭಾವಿಕ ಪರಿವರ್ತನೆಯಾದುದು ದೈವೀಸಂಕಲ್ಪವೇ ಸರಿ. " ನನ್ನ ಪಾತ್ರಕ್ಕೆ ಅವರು ತಲೆದೂಗುತ್ತಿದ್ದಾರೆ. ರಾಮಚಂದ್ರ ಗುರುದೇವರ ಸಂದೇಶಕ್ಕೆ ಆತುರನಾಗಿದ್ದಾನೆ. ಕನ್ನಡ "ಗೀತಾಂಜಲಿ"ಯಿಂದ ಗುರುದೇವರ ಸಂದೇಶವನ್ನು ಓದುತ್ತಿದ್ದೇನೆ:

" ನಿನ್ನನ್ನು ಬಲ್ಲೆನೆಂದು ನಾನು ಜನರಲ್ಲಿ ಜಂಬ ಕೊಚ್ಚಿದೆನು. ನನ್ನೆಲ್ಲ ಕೃತಿಗಳಲ್ಲಿ ಅವರು ನಿನ್ನ ಚಿತ್ರಗಳನ್ನು ಕಾಣುತ್ತಾರೆ. 'ಅವನು ಯಾರು ? ' ಎಂದು ನನ್ನಲ್ಲಿ ಬಂದು ಅವರು ಕೇಳುತ್ತಾರೆ. ಅವರಿಗೆ ಉತ್ತರ ಹೇಳುವ ಬಗೆಯನ್ನು ನಾನು ಅರಿಯೆನು. ' ನಿಜವಾಗಿಯೂ ನಾನು ಹೇಳಲಾರೆನು' ಎನ್ನುವೆನು. ಅವರು ನನ್ನ ಮೇಲೆ ತಪ್ಪು ಹೊರಿಸಿ ಹಳಿದು ಹೋಗುವರು. ನೀನು ನಗುತ್ತ ಅಲ್ಲಿಯೇ ವಿರಾಜಮಾನನಾಗಿರುವಿ. ಅಮರ ಗೀತೆಗಳಲ್ಲಿ ನಾನು ನಿನ್ನ ಕಥೆಗಳನ್ನಿರಿಸುವೆನು. ಆ ರಹಸ್ಯವು ನನ್ನ ಹೃದಯದಿಂದ ಹೊರಹೊಮ್ಮುವದು. 'ನಿನ್ನ ಅರ್ಥನ್ಯಾಸವನ್ನೆಲ್ಲ ನಮಗೆ ಬಿಡಿಸಿ ಹೇಳು,' ಎಂದು ಅವರು ನನಗೆ ಕೇಳುವರು. ಅವರಿಗೆ ಉತ್ತರ ಹೇಳುವ ಬಗೆಯನ್ನು ನಾನು ಅರಿಯೆನು. 'ಹಾಂ! ಅವುಗಳ ಗೂಢಾರ್ಥ ಏನೆಂಬುದು ಯಾರು ಬಲ್ಲರು! ' ಎನ್ನುತ್ತೇನೆ. ಅವರು ಅಪಹಾಸ್ಯ ಮಾಡಿ ಹಳಿದು ಹೋಗುವರು. ನೀನು ನಗುತ್ತ ಅಲ್ಲಿಯೇ ವಿರಾಜಮಾನನಾಗಿರುವಿ. "

ರಾಮಚಂದ್ರನು ಗಂಭೀರ ಮುಖದಿಂದ ಇನ್ನೊಂದು ದಯೆಯನ್ನು ಬಯಸುತ್ತಿದ್ದಾನೆ: "ಸ್ವಾಮಿ ! ಗೀತೆಯ ಭಾವಾರ್ಥವನ್ನು ಬಿಡಿಸಿ ಹೇಳು. " ನಾನು ಭಾಷ್ಯದ ಧಾಟಿ ಹಿಡಿದಿದ್ದೇನೆ: " ದೇವರನ್ನು ವಿಶ್ವದ ವ್ಯಾಪಾರದಲ್ಲಿ ಗುರುತಿಸುವ ಬಗೆಯನ್ನು ಗುರುದೇವರು ಬಹು ಸುಂದರವಾಗಿ ಪರಿಣಾಮಕಾರಿಯಾಗಿ ನುಡಿದಿದ್ದಾರೆ. ಮಾನವರು ದೇವರ ಗುಣವಾಚಕ (epithets) ವಿಶೇಷಣ ಸಹಸ್ರ ಸಹಸ್ರ ನಾಮಾವಳಿಗಳಿಂದಲೇ ದೇವರನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂದು ದ್ರಷ್ಟಾರರ ಮಂತ್ರ ವಾಕ್ಯಗಳಿಂದ ಗುರುದೇವರು ಬೋಧಿಸಿ

ದ್ದಾರೆ. ಇಂದು ಮಹಾನಂದದ ಮಂತ್ರ ಪತ್ರ ಪುಷ್ಪ ಫಲ ಸಂಚಯದ ಅದ್ವಿತೀಯ ದಿನ. "

ರಾಮಚಂದ್ರನಿಗೆ ಮಿತಿಮೀರಿದ ಆನಂದ; ಕರ್ತವ್ಯಪರಾಯಣ ಅಧಿಕಾರದ ವರ್ಗಕ್ಕೆ ಭಾವ ಸಾಹಿತ್ಯವು ಹೊಸಬಾಳಿನ ಬೆಳಕು ನೀಡುತ್ತಿದೆ.

"ಸ್ವಾಮಿಗೂ ಸ್ವಾಮಿಯ ಒಡನಾಟದ ಪರಿಹಾರ ಪಥಕಕ್ಕೂ ನನ್ನ ಅನಂತ ಅಭಿನಂದನೆಗಳು ! "

"ರಾಮಚಂದ್ರನ ಸಹಕಾರ ಸಹವಾಸ ಸ್ನೇಹಾತಿಶಯಗಳಿಗೆ ನಮ್ಮೆಲ್ಲರ ವಂದನೆ! "

ಮರುದಿನ ನಸುಕಿನಲ್ಲೆದ್ದು ಸಿದ್ಧರಾಗಿ ನಿಲ್ದಾಣಕ್ಕೆ ಬಂದು, ರಾಮಚಂದ್ರನಿಗೆ ಶುಭಕೋರಿ ನಮ್ಮ ನಗರದತ್ತ ಪ್ರಯಾಣ ಮಾಡಿದೆವು. ನಾವು ಮರುದಿನ ರವಿವಾರ ನಸುಕಿನಲ್ಲಿ ಕನ್ನಡ ಭೂಮಿಗೆ ಬಂದಿಳಿದೆವು. ಮರು ದಿವಸ (ಹನ್ನೆರಡನೆಯದಿನ) ನ್ಯಾಯಾಧೀಶರನ್ನು ಕಂಡೆನು. ಅವರು ಅಪಾರವಾದ ಹರ್ಷದಿಂದ ತಮಗೆ ತಲುಪಿದ ಡೆಹರಿ-ಓನ್-ಸೋನ್ ಹಿರಿಯ ವೈದ್ಯರ ತಂತಿ ಸಂದೇಶವನ್ನು ನನಗೆ ತೋರಿಸಿದರು. ನಾನು ನಮಸ್ಕರಿಸಿದೆನು. ಅವರು ತಮ್ಮ ಬಲಬದಿಗೆ ಇದ್ದ ಫಲಕದ ಕಡೆಗೆ ಬೆರಳು ಮಾಡಿದರು: " ಸತ್ಯಮೇವ ಜಯತೇ! "



ಪರಿಶಿಷ್ಟ:

(೧)

ತನಗೆ ಮುನಿವವರಿಗೆ ತಾ ಮುನಿಯಲೇಕಯ್ಯ ?
ತನಗಾದ ಆಗೇನು ? ಅವರಿಗಾದ ಚೇಗೇನು?
ತನುವಿನ ಕೋಪ ತನ್ನ ಹಿರಿಯತನದ ಕೇಡು !
ಮನದ ಕೋಪ ತನ್ನರುಹಿನ ಕೇಡು !
ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ
ನೆರೆಮನೆಯ ಸುಡವುದೆ ಕೂಡಲ ಸಂಗಮದೇವಾ?

— ಶ್ರೀ ಬಸವಣ್ಣನವರು
(ಭಕ್ತಜ್ಞಾನಿಸ್ಥಲ. ೯–೧೩೫)

(೨)

"No blazoned banner we unfold
One charge alone we give to youth,
Against the sceptred myth to hold
The golden heresy of Truth. " — AE

(೩)

ಅರಕ್ಷಿತಂ ತಿಷ್ಠತಿ ದೈವರಕ್ಷಿತಂ | ಸುರಕ್ಷಿತಂ ದೈವಹತಂ ವಿನಶ್ಯತಿ||
ಜೀವತ್ಯನಾಥೋ ವಿಪಿನೇऽಪ್ಯರಕ್ಷಿತಃ | ಕೃತಪ್ರಯತ್ನೋऽಪಿ ಗೃಹೇ ವಿನಶ್ಯತಿ||

(೪)

**Supplementary Criminal Circular No. 14**

The Honourable the Chief Justice and Judges with the previous approval of His Excellency the Governor, are pleased to direct that the following new sub-paragraph be inserted after sub-paragraph (2) of Circular 104 of Chapter VI, at page 59 of the Criminal Manual, 1947 :

"(2-A). It has been brought to the notice of the Honourable the Chief Justice and Judges that some times Magistrates release children on bail without consulting the Probation Officer or without giving an intimation to him. Section 27-A of the Act directs that the Court should record its findings on the facts of the case after making an investigation into the character and circumstances of the child. Such investigation for the purpose of determining the order to be passed by the Court is not possible unless the child is deta ined in a Remand Home for observation for a sufficiently long period. Detention in a Remand Home is entirely in the interest of the child both physical and moral. A careful diagnosis of the child's difficulties would enable he Probation Officer to tender proper advice to the Court at the material time Magistrates should, therefore, avoid indiscriminate bailing out of children and should properly exercise their discretion in bailing them out only in safe and deserving cases, preferably on the recommendation of a Probation Officer."

(Vide Government Circular, Home Department, No. 5375/5 dated the 16 th June 1948)

Vide High Court notification No. P.0907/48 dated the 14 th September 1948, published at Page 780 of the Bombay Government Gazette for 1948, Part IV-c)

# ಒಪ್ಪೋಲೆ

| ಪುಟ— | ಸಾಲು— | ತಪ್ಪು— | ಒಪ್ಪು |
|---|---|---|---|
| ೧೫ | ೧೪ | ದೈನಂದಿಗಳ | ದೈನಂದಿನಗಳ |
| " | ೨೦ | ದಿದ | ದಿನ |
| ೨೪ | ೭ | ಗದರೊ | ಗಾದರೊ |
| " | ೧೬ | ದಿಗದಂತ | ದಿಗಂತ |
| ೨೮ | ೯ | ಕೊಂಡ | ಕೊಂಡು |
| ೩೦ | ೨೨ | ತಾಯಿಯು | ತಾಯಿಯ |
| ೩೨ | ೮ | ಆ ಯದ | ಅರಿಯದ |
| ೩೪ | ೧೫ | ತಿಳಿಸ | ತಿಳಿಸಿ |
| ೪೮ | ೨೪ | ಕಣು | ಕಣ್ಣು |
| " | ೨೫ | ಬೆನ್ನಟ | ಬೆನ್ನಟ್ಟಿ |
| ೫೧ | ೬ | ನಮ್ಕರಿಸಿ | ನಮಸ್ಕರಿಸಿ |
| ೬೦ | ೧೩ | ಬೇಕು. | ಬೇಕು. ” |
| ೮೨ | ೯ | ತಹಿರಿಯ | ಹಿರಿಯ |
| ೮೬ | ೪ | ಪಜುಗಳ | ಪಂಜುಗಳು |
| " | ೫ | ನಮ್ಮನ್ನು | ನಮ್ಮನ್ನು |
| ೧೦೦ | ೪ | ಮುಖ್ಯ ಮಾರ್ಗಕ್ಕೆ | ಮುಖ್ಯ |
| ೧೦೧ | ೨೪ | ಗೌ | ಗೌರವದ |
| ೧೧೫ | ೨ | ನನಗೆ | ನನ್ನ |
| ೧೧೭ | ೨೨ | wieked | wicked |
| " | " | reconeil | reconcil |
| ೧೧೯ | ೮ | ತಸ್ಮೈಯ | ತಸ್ಮೈ |
| ೧೨೪ | ೨೨ | ನಮ್ಮ ಅಭಿ | ಅಭಿ |